# ಸಿದ್ಧಗಂಗಾ

ಸಂಪುಟ-೨೪ ಸಂಚಿಕೆ-೯ ಸೆಪ್ಟಂಬರ್, ೧೯೮೮

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಹರಿವ ಮನವನು ಹಿಡಿದು ಒಂದೆಡೆಗೆ ಬಂಧಿಸು
ತೊರೆಯದಿರು ಯತ್ನವನು । ಎಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಮಾಡುವ ಕಾಯಕ ಯಾವುದಾದರೆ ಏನು
ಮಾಡು ಮನವಿಟ್ಟು ಎರಡಿರದೆ । ಎಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ನೊಂದ ಜೀವಿಗಳೊಳು ಹೊಂದಾಣಿಕೆಯಿರಲಿ
ಬೆಂದ ಬದುಕಿಗೆ ತಂಪು ನಡೆಯಿರಲಿ । ಎಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್. ವಿ. ವೀರಭದ್ರಯ್ಯ

# ಈ ಸಂಚಿಕೆಯಲ್ಲಿ

# ಶ್ರೀವಾಣಿ



"ಮನಏವ ಮನುಷ್ಯಾಣಾಂಕಾರಣಂಬಂಧ ಕ್ಷಯೋಃ" ಮನುಷ್ಯನ ಮನಸ್ಸೇ ಬಂಧನ ಮತ್ತು ಮೋಕ್ಷಗಳಿಗೆ ಮುಖ್ಯ ಕಾರಣ. ಜೀವನದನೋವು-ನಲಿವು ಸುಖ-ದುಃಖ ಮತ್ತು ಇಹಪರ ಸೌಖ್ಯಗಳಿಗೆಲ್ಲಾ ಮನಸ್ಸೇ ಕಾರಣವೆಂದಾಗುತ್ತದೆ. ಆದ್ದರಿಂದ ಮನಸ್ಸಿನ ಸ್ವಭಾವ ಮತ್ತು ಇತಿಮಿತಿಗಳ ಅರಿವು ಅಗತ್ಯ. ಮನವೆಂಬ ಮರ್ಕಟನ ತಡೆಯಲಾರೆನು ದೇವ ।ಎನಿತಿದ ಚಪಲ ಚೇಷ್ಟೆಗಳ ವರ್ಣಿಸಲಿ ॥ ಎನ್ನುತ್ತಾರೆ ಸರ್ಪಭೂಷಣ ಶಿವಯೋಗಿಗಳವರು. ಚಂಚಲ ಸ್ವಭಾವವುಳ್ಳ ಕಪಿಗೆ ಮನಸ್ಸಿನ ಹೋಲಿಕೆ ಕೊಟ್ಟಿದ್ದಾರೆ. ಚಪಲ ಚೇಷ್ಟೆ ವರ್ಣಿಸಲಸದಳವೆನ್ನುತ್ತಾರೆ. ಈ ಚಂಚಲ ಸ್ವಭಾವದ ಮನಸ್ಸನ್ನು ಸಂಯಮಿಸಬೇಕು. ಅದರ ಪ್ರವೃತ್ತಿಯನ್ನು ಒಂದೆಡೆ ಕೇಂದ್ರೀಕರಿಸಬೇಕು ಮತ್ತೊಬ್ಬ ಅನುಭಾವಿಗಳು ಅಪ್ಪಣೆ ಕೊಡಿಸಿದಂತೆ 'ಮನವ ಹಿಡಿದು ಆಳ್ವರಾರ ಕಾಣೆನು ' ಹುಲಿ, ಕರಡಿ, ಹಾವು ಮೊದಲಾದ ಕಾಡುಮೃಗಗಳನ್ನು ಹಿಡಿದು ಆಡಿಸುವವರನ್ನು ಕಾಣಬಹುದು. ಮನಸ್ಸನ್ನು ಒಂದೆಡೆ ನಿಲ್ಲಿಸಿ ಆಳುವರನ್ನು ಕಾಣಲಾಗದು. ಮನಸ್ಸಿನ ಸಂಕಲ್ಪ ವಿಕಲ್ಪಗಳನ್ನು ಕಳೆದು ಏಕಾಗ್ರತೆ ಸಾಧಿಸಬೇಕು. ಅದು ಕಷ್ಟ ಸಾಧ್ಯ. ಯೋಗ ಸಾಧನೆಗೆ ಕೈದುವನ್ನಾಗಿ ಮಾಡಿಕೊಳ್ಳಬೇಕು ಜಾಗರೂಕವಾಗಿ ಮನಸ್ಸನ್ನು ಪಳಗಿಸಬೇಕು. ನಿಜಗುಣ ಶಿವಯೋಗಿಗಳು ತಮ್ಮ ಒಂದು ಹಾಡಿನಲ್ಲಿ ಮನೋಜ್ಞವಾಗಿ ತಿಳಿಸಿದ್ದಾರೆ ''ಮನವೆಂಬ ಗಿಳಿಯನೊಯ್ಯಾರಜಾಣೋವಿ ಮೆಲ್ಲನೆ ಮುದ್ದು ನುಡಿಗಲಿಸೆಲೆ ಮಾನಿನಿ'' ॥ ಮನಸ್ಸು ಒಂದು ಗಿಳಿ ಅದಕ್ಕೆ ಬಹಳ ಪ್ರೀತಿಯಿಂದ ಮೈದಡವಿ ಮುದ್ದು ನಡೆನುಡಿಯನ್ನು ಕಲಿಸಬೇಕು. ಅದರ ಮೇಲೆ ಬಲಾತ್ಕಾರ ಕೂಡದು. ಅದರ ಸಹಜ ಸ್ವಭಾವ ಮತ್ತು ರಹಸ್ಯವನ್ನರಿಯುವ ಬುದ್ಧಿವಂತಿಕೆ ಬೇಕು. ಅಸಹಜವಾಗಿ ಒತ್ತಾಯದಿಂದ ನಿಗ್ರಹಿಸುವುದು ಸಾಧ್ಯವಿಲ್ಲ. ಎಂದು ಮನಸ್ಸಿನ ಸಹಜ ಸ್ವರೂಪವನ್ನೇ ಬಯಲಿಗೆಳೆದಿದ್ದಾರೆ ಆದ್ದರಿಂದ ಯಾವುದೇ ವಸ್ತು ಒತ್ತಡದಿಂದ ಹಿಡಿತಕ್ಕೆ ಬಾರದು. ಮನಸ್ಸನ್ನು ಒತ್ತಾಯದಿಂದ ನಿಗ್ರಹಿಸುವ ಪ್ರಯತ್ನ ಸಲ್ಲದು, ಅದು ವ್ಯರ್ಥ ಅಷ್ಟೇ ಅಲ್ಲ, ವಿರುದ್ಧ ದಿಕ್ಕಿನತ್ತ ಸಾಗಿ ಅನರ್ಥಕಾರಿಯಾಗುತ್ತದೆ. ಅದಕ್ಕೆ ಬದಲು ಪ್ರೀತಿ, ಮೇಲ್ನುಡಿಗಳಿಂದ ಅರಿವನ್ನು ಮೂಡಿಸಬೇಕು. ಬುದ್ಧಿವಂತಿಕೆಯಿಂದ ವಿವೇಕವನ್ನು ಚುರುಕುಗೊಳಿಸಬೇಕು ಚಿತ್ತ ಶುದ್ಧಿಯುಂಟಾದರೆ ಮನಸ್ಸಿನ ತಾಕಲಾಟ ಕಡಿಮೆಯಾಗಿ ನಿಜ ನೆಲೆಯನ್ನರಿಯಲು ಸಾರ್ಥಕವಾಗುತ್ತದೆ.

## ಸಿದ್ಧಗಂಗಾ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು

**ಪ॥ ಚನ್ನಪ್ಪ ಎರೇಸೀಮೆ**

* * *

ಸಂಪಾದಕರು

**ಹೆಚ್. ವಿ. ವೀರಭದ್ರಯ್ಯ**

* * *

ಸಹ ಸಂಪಾದಕರು

**ಬಿ. ವೀರಭದ್ರಯ್ಯ**

**ಪಿ. ಎನ್. ಚಂದ್ರಶೇಖರಯ್ಯ**

* * *

ಜಾಹೀರಾತು ವಿಭಾಗ

**ಎಂ. ರೇಣುಕಾರಾಧ್ಯ**

* * *

ಪ್ರಸಾರ ವಿಭಾಗ

**ಆರ್. ಎಸ್. ಮಲ್ಲೇಶಪ್ಪ**

* * *

ಪ್ರಕಾಶಕರು

**ಹೆಚ್. ಬಿ. ಗಂಗಾಧರಯ್ಯ**

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

**ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ**

* * *

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

### ಚಂದಾ ವಿವರ

ವಾರ್ಷಿಕ ಚಂದಾ 20 - 00 ರೂ

ಅಜೀವ ಸದಸ್ಯತ್ವ 201 - 00 ರೂ

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಅಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

**" ಸಂಪಾದಕರು "**

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿ ಕೊಡಬೇಕಾಗಿ ಪ್ರಾರ್ಥನೆ

# ಸಂಪಾದಕೀಯ

## ...ರಳಲ್ಲಿ ಎಣ್ಣೆ ಹಿಂಡುವ ಕೆಲಸ

ಸ್ವಾತಂತ್ರ್ಯ ಬಂದು ನಾಲ್ಕು ದಶಕಗಳೇ ಸಂದು ಹೋದವು. ರಾಷ್ಟ್ರ ಜೀವನದಲ್ಲಿ ...ಹತ್ವದ ಘಟನೆಗಳು ಸಂಭವಿಸಿದುವು. ಜೀವನದ ಎಲ್ಲ ಕ್ಷೇತ್ರಗಳಲ್ಲಿ ಹಲವು ಹನ್ನೊಂದು ...ಧಾರಣೆಗಳು ತಲೆದೋರಿದವು. ಸುಧಾರಣೆಗಳೆಂಬಂತೆ ಬಂದವುಗಳೆಷ್ಟೋ! ಅದ ...ಲ್ಲೂ ಶಿಕ್ಷಣ ಕ್ಷೇತ್ರದಲ್ಲಿ ಸಾಗಿರುವ ಹೊಸ ಹೊಸ ಸುಧಾರಣೆಗಳನ್ನು ಗಮನಿಸಿದಾಗ ...ಾರತೀಯನಿಗೆ ನಿರಾಶೆಯಾಗದಿರದು, ವಿಜ್ಞಾನ, ತಂತ್ರಜ್ಞಾನ, ಅಣುವಿಜ್ಞಾನ, ...ವೈದ್ಯಕೀಯ ಜ್ಞಾನ, ಬಾಹ್ಯಾಕಾಶ ವಿಜ್ಞಾನಗಳಲ್ಲಿ ವಿಸ್ಮಯಗೊಳಿಸುವಂಥ ಅಭಿವೃದ್ಧಿ ...ಯಾಗಿರುವುದು ನಿಜ, ಕೈಗಾರಿಕಾ ಕ್ಷೇತ್ರದಲ್ಲಿ ಬೃಹತ್ ಕೈಗಾರಿಕೆ ಸ್ಥಾವರಗಳೂ ...ರಾಷ್ಟ್ರ ಜೀವನದ ಸಮೃದ್ಧಿಗೆ ಶ್ರಮಿಸುತ್ತಿರುವುದು ದಿಟ. ಕೃಷಿ ಕ್ಷೇತ್ರದಲ್ಲಿ ಹಸಿರು ...ಕ್ರಾಂತಿನಡೆದಿರುವುದು ವೇದ್ಯ. ಅರಣ್ಯ ರಂಗದಲ್ಲಿ ಆಗಿರುವ, ಆಗುತ್ತಿರುವ ಭಯಂಕರ ...ಂಧ್ವಸಕ ಯೋಜನೆಗಳ ವಿರುದ್ಧ ಪ್ರತಿಭಟನಾತ್ಮಕ ಚಳುವಳಿಗಳೂ ಸುಧಾರಣೆಯ ...ದಿಕ್ಕು ಬದಲಾಗಬೇಕೆಂಬುದನ್ನು ಸೂಚಿಸುವುದಿಲ್ಲವೇ ? ಪರಿಸರ ಪ್ರಜ್ಞೆ ಜಾಗೃತವಾ...ಗುವುದು ಶುಭ ಚಿಹ್ನೆಯಲ್ಲವೇ? ಕೇವಲ ಅಣುಸ್ಥಾವರಗಳ ಸ್ಥಾಪನೆಯಿಂದ ಮಾತ್ರ ...ದೇಶಾಭಿವೃದ್ಧಿಯಾದೀತೆ? ಪೂರ್ವಿಕರು ಶಾಂತ ಜೀವನಕ್ಕೆ ಬೇಕಾಗಬಹುದಾದ ಪರಿಸರ ...ಪ್ರಜ್ಞೆಯುಳ್ಳವರಾಗಿದ್ದರು ಎಂಬುದನ್ನು ಮರೆಯಬಹುದೇ ? ಅದೂ ಹೋಗಲಿ ನಿತ್ಯ ...ಹರಿದ್ವರ್ಣದ ಅರಣ್ಯಗಳಿಗೆ ಹೆಸರಾಗಿದ್ದ ನಮ್ಮ ನಾಡಿನಲ್ಲಿಂದು ಕಾಣುತ್ತಿರುವುದೇನು ? ...ಎತ್ತೆತ್ತ ನೋಡಿದರೂ ಕಾಂಕ್ರೀಟ್ ಕಾಡುಗಳನ್ನಲ್ಲವೇ ? ತರುಮರಾದಿಗಳಿಂದ ದೊರೆ...ಯುವಶಾಂತವಾತಾವರಣ ಭವ್ಯವಾದ ಕಾಂಕ್ರೀಟ್ ಕಟ್ಟಡಗಳಲ್ಲಿ ದೊರೆಯಬಲ್ಲುದೇ ? ಅಲ್ಲದೆ, ಹೊಸ ಶಿಕ್ಷಣ ನೀತಿಯನ್ನು ರೂಪಿಸುತ್ತಿರುವ ನಮ್ಮ ಸರ್ಕಾರ, ಮುಖಂಡರು ಆಲೋಚನೆ ಮಾಡುತ್ತಿಲ್ಲವೇಕೆ ? ಸ್ವಾತಂತ್ರ್ಯಗಳಿಸಿದ ಮೇಲೆ ನಾವು ಕಟ್ಟಿದ ಅಣೆ ಕಟ್ಟುಗಳೆಷ್ಟು, ಸ್ಥಾಪಿಸಿದ ಬೃಹತ್ ಕೈಗಾರಿಕೆಗಳೆಷ್ಟು, ಕೈಗೊಂಡ ಸ್ಥಾವರಗಳೆಷ್ಟು, ವೆಚ್ಚ ಮಾಡಿದ ಕೋಟ್ಯಾಂತರ ಹಣವೆಷ್ಟು? ಆದರೆ ಇವೆಲ್ಲಕ್ಕಿಂತ ಮುಖ್ಯವಾಗಿ ನಿರ್ಮಿಸಿದ ಸುಸಂಸ್ಕೃತ ಯುವಜನಾಂಗವೆಷ್ಟು ? ಶಿಕ್ಷಣಕ್ಕಾಗಿ ರಾಷ್ಟ್ರದ ಆದಾಯದಲ್ಲಿ ಬಳಸು ತ್ತಿರುವ ಹಣವೆಷ್ಟು ? ಯಾರಿಗೆ ಬೇಕಾಗಿದೆ ಶಿಕ್ಷಣ ಕ್ಷೇತ್ರ ? ರಾಜಕೀಯ ಲಾಭ ಕ್ಕಾಗಿ ಎಲ್ಲ ನಡೆದಿರುವಾಗ ಗಾಂಧೀಜಿ ಹೇಳುತ್ತಿದ್ದ **ಸುಸಂಸ್ಕೃತ ಯುವಜನಾಂಗ ರಾಷ್ಟ್ರದ ಅಮೂಲ್ಯ ಸಂಪತ್ತು?** ಎಂಬುದನ್ನು ಗಂಭೀರವಾಗಿ ಚಿಂತಿಸುವರೆಷ್ಟು

ನಮ್ಮಲ್ಲಿಂದು ಪ್ರತಿಭಾವಂತ ಇಂಜಿನಿಯರುಗಳಿದಾರ್ರೆ, ವೈದ್ಯರುಗಳಿದ್ದಾರೆ ಪ್ರತಿಭಾ ಆಡಳಿತಗಾರರಿದ್ದಾರೆ, ಪ್ರತಿಭಾವಂತ ಶಿಕ್ಷಕರೂ ಇದ್ದಾರೆ. ಆದರೆ ಸುಸಂಸ್ಕೃತರ ಮಂದಿ ಸಿಕ್ಕುತ್ತಾರೆ, ರಾಷ್ಟ್ರ ಬಯಸುವುದು ಸಂಸ್ಕೃತವಂತ ಜನಾಂಗವನ್ನು. ಸಹಬಾ ಹೆಸರಾದ ಭಾರತದಲ್ಲಿ ಇಂದು ನಡೆದಿರುವುದಾದರೂ ಏನು? ದೀನದಲಿತರ ಮೇ ಧನಾಢ್ಯರ, ಬಲವುಳ್ಳವರ ದೌರ್ಜನ್ಯ, ಹರಿಜನರ ಮೇಲೆ ಸವರ್ಣೀಯರ ದೋ ಸ್ತ್ರೀಯರ ಮೇಲೆ ಹಾಡುಹಗಲಲ್ಲೇ ಅತ್ಯಾಚಾರ, ಅದೂ ಶಿಕ್ಷಿತರೆನಿಸಿಕೊಂಡವಂದ ಸೇವಾಸಂಸ್ಥೆಗಳ ಮೇಲೆ ಆಕ್ರಮಣ, ಧರ್ಮಕ್ಷೇತ್ರಗಳ ಬಗ್ಗೆ ತೀವ್ರ ಅನಾದರ, ಸಾ ದೆಂಬಂತೆ ಅಪಪ್ರಚಾರ, ಏನು ನಡೆದಿದೆ ಇದೆಲ್ಲ ? ಯಾರು ಯೋಚಿಸಬೇಕು ಇದನ್ನೆ ಸರಿಪಡಿಸುವವರಾದರೂ ಎಲ್ಲಿದ್ದಾರೆ? ಯುವಜನಾಂಗಕ್ಕೆ ಕೊಡುತ್ತಿರುವ ಆದರ್ಶಗಳ ರಾಷ್ಟ್ರಭಕ್ತರ, ಸಮಾಜ ಹಿತೈಷಿಗಳ, ಚಾರಿತ್ರಿಕ ಪುರುಷರ, ಧರ್ಮ ದೀಪಕ ಜೀವನವನ್ನೆ ? ಅಥವಾ ಕೊಲೆಗಡುಕರ, ಗೂಂಡಾಗಳ, ಕುಪ್ರಸಿದ್ಧರ ಜೀವನವನ್ನೆ ಆಲೋಚಿಸುವುದು ಬೇಡವೇ? ಶಿಕ್ಷಣದ ಬಗ್ಗೆ ನಮ್ಮ ಮುಖಂಡರುಗಳಿಗೆ ತೀವ್ರ ಆಸ ಬಾರದೇ ಹೋದರೆ ಎಲ್ಲ ಸುಧಾರಣೆಗಳೂ ಮರಳಲ್ಲಿ ಎಣ್ಣೆ ಹಿಂಡಿದಂತಾದೀತು !

---

## ಜಗದ್ಗುರುವೆ

– ಎಂ.ಎ. ನೀಲಾಂಬಿಕ

ಸಿದ್ಧಲಿಂಗೇಶ ಸಿದ್ಧಲಿಂಗೇಶ ;
ಜನತೆಯ ಮೊರೆಕೇಳ ಜಪದಕಂಬನಿ ಒರಿಸೆ ;
ಮತ್ತೊಮ್ಮೆ ಅವತರಿಸೆ ನೀ ;
ಶಿವಕು"ಮಾರನಾಗಿ ಮತ್ತೊಮ್ಮೆ ಅವತರಿಸಿಹೆ ನೀನು ॥

ಸಿದ್ಧ ಸಿದ್ಧರ ಸಿದ್ಧ, ಯೋಗಿ ಯೋಗಿಯು ನೀನು ;
ತ್ಯಾಗಿ ತ್ಯಾಗಿಗಳಲ್ಲಿ ತ್ಯಾಗಿಯು ನೀನು ;
ಜ್ಞಾನಾನ್ನದ ಜೊತೆಗೆ, ದೈವದಾಸೋಹ ನಡೆಸಿ ;
ತ್ರಿವಿಧದಾಸೋಹಿ ಯಾಗಿ ಮೆರೆಯುತಿಹೆ ನೀನು ; ॥

ಸಿದ್ಧಗಂಗೆಯು ಇಂದು ಕಲ್ಯಾಣವೆನಿಸಿಹುದು ;
ಕೈಲಾಸವನ್ನಿಲ್ಲಿ ಕಾಣಿಸಿಹೆ ನೀನು ;
ಭವದ ಬಾದೆಯ ಕಳೆದು ; ಮುಕ್ತಿಮಾರ್ಗವ ತೋರಿ ;
ಜಗದ ಗುರುವಾಗಿ ಬೆಳಗುತಿಹೆ ನೀನು. ॥

ಆರೋಗ್ಯ ರಹಸ್ಯ-೬

## ಚಹ ಕಾಫಿ ಕೋಕೋ

ಮಹಾತ್ಮ ಗಾಂಧಿ

ಇವು ಯಾವುದೂ ದೇಹಕ್ಕೆ ಅಗತ್ಯವಲ್ಲ. ಚಹಾದ ರೂಢಿ ಚೀನಾ ದೇಶದಲ್ಲಿ ಮೊದಲಾಯಿತು ಎನ್ನುತ್ತಾರೆ. ಆ ದೇಶದಲ್ಲಿ ಚಹಾಕ್ಕೆ ಒಂದು ವಿಶೇಷ ಉಪಯೋಗವಿದೆ. ಚೀನಾದಲ್ಲಿ ಕುಡಿಯುವ ನೀರು ಶುದ್ಧವೆಂದು ಹೇಳುವಂತೆಯೆ ಇಲ್ಲ. ಆದ್ದರಿಂದ ನೀರನ್ನು ಕಾಯಿಸಿಯೇ ಕುಡಿಯ ಬೇಕು. ಯಾರೋ ಒಬ್ಬ ಚೀನೀ ಮನುಷ್ಯ. ನೀರಿನ ಜೊತೆಗೆ ಸೇರಿಸಿ ಕಾಯಿಸಿದರೆ ನೀರಿಗೆ ಒಳ್ಳೆಯ ಬಂಗಾರದ ಬಣ್ಣವನ್ನು ಕೊಡುವ ಒಂದು ಸೊಪ್ಪನ್ನು ಕಂಡುಹಿಡಿದ. ಅದರ ಹೆಸರು ಚಾ ನೀರು ಮರಳದೆ ಇದ್ದರೆ ಆ ಬಣ್ಣ ಬರುವುದಿಲ್ಲ. ಹೀಗಾಗಿ ನೀರು ಮರಳಿದೆಯೋ ಇಲ್ಲವೋ ಪರೀಕ್ಷಿಸಲು ಈ ಸೊಪ್ಪು ಒಂದು ಅಮೋಘ ಸಾಧನವಾಯಿತು. ಅದರ ಮೇಲೆ ಮರಳುವ ನೀರನ್ನು ಹನಿಸುವುದು ನೀರು ಮರಳುತ್ತಿದ್ದರೆ ಸೋಸಕದಿಂದ ಇಳಿದ ನೀರಿಗೆ ಬಂಗಾರದ ಬಣ್ಣವಿರುತ್ತದೆ. ಆ ನೀರಿಗೆ ಒಂದು ಬಗೆಯ ಮೃದು ರುಚಿಯನ್ನು ನೀಡವುದೂ ಚಾ ಯೆಲೆಯ ಇನ್ನೊಂದು ಗುಣ.

ಮೇಲೆ ಹೇಳಿದಂತೆ ಮಾಡಿದರೆ ಚಹಾ ಹಾನಿಕರವಲ್ಲ ಆದರೆ ಸಾಧಾರಣವಾಗಿ ಚಹಾ ಮಾಡುವ ರೀತಿ ಬೇರೆ. ಅದರಲ್ಲಿ ಗೂಣವಂತೂ ಇಲ್ಲ, ಹಾನಿಯೇನೋ ಇದೆ. ಚಾಯೆಲೆಯಲ್ಲಿರುವ ಟ್ಯಾನಿನ್ ವೈಗೆ ವಿಷ, ಚರ್ಮಾಲಯಗಳಲ್ಲಿ ತೊಗಲನ್ನೂ ಹದಮಾಡುವಾಗ ಅದನ್ನು ಸೆಟಿಸಲು ಟ್ಯಾನಿನ್ನನ್ನು ಬಳಸತ್ತಾರೆ. ಅದನ್ನು ಹೊಟ್ಟೆಗೆತೆಗೆದು ಕೊಂಡರೆ ಹೊಟ್ಟೆಯ, ಕರುಳಿನ ಲೋಳೆಯ ಮೆದುಪೊರೆಯನ್ನು ಅದು ಗಡುಸಾಗಿ ಮಾಡುತ್ತದೆ. ಇದರಿಂದ ಜೀರ್ಣಶಕ್ತಿಗೆ ಬಾಧಕವಾಗಿ ಅಗ್ನಿ ಮಾಂದ್ಯ ಬರುತ್ತದೆ. ಇಂಗ್ಲೆಂಡಿನ ಅನೇಕ ಸ್ತ್ರೀಯರು ಟ್ಯಾನಿನ್ ಇರುವ ಚಹಾ ಕುಡಿಯುವ ರೂಢಿಯಿಂದ ಹಲವಾರು ರೋಗಗಳಿಗೆ ಗುರಿಯಾಗಿದ್ದಾರೆ ಎಂದು ಹೇಳುತ್ತಾರೆ. ಚಹಾ ಕುಡಿಯುವ ಚಟವಿದ್ದವರಿಗೆ ಹೊತ್ತಿಗೆ ಸರಿಯಾಗಿ ಒಂದು ಬಟ್ಟಲು ಚಹಾ ಸಿಗದಿದ್ದರೆ ಚಡಪಡಿಸಿಬಿಡುತ್ತಾರೆ. ನನ್ನ ಅಭಿಪ್ರಾಯದಲ್ಲಿ, ಚಹಾದ ಉಪಯೋಗ ಕಿಂಚಿತ್ತಾದರೂ ಇದ್ದರೆ ಅದೊಂದು ಬಿಸಿ ಬಿಸಿ ಸಿಹಿ ಪಾನೀಯ, ಅದರಲ್ಲಿ ಹಾಲು ಸಕ್ಕರೆ ಸೇರಿಸಿ ಕುಡಿದರೂ ಇದೇ ಲಾಭ ವಾಗುತ್ತದೆ.

ಚಹಾದ ಬಗ್ಗೆ ಹೇಳಿದುವೆಲ್ಲವೂ ಕಾಫಿಗೂ ಹೆಚ್ಚು ಕಡಿಮೆ ಅನ್ವಯಿಸುತ್ತದೆ, ಕಾಫಿ ಕಫವನ್ನು ಕತ್ತರಿಸುತ್ತದೆ, ವಾಯುಹರ. ಆದರೆ ವೀರ್ಯನಾಶಕಾರಿ. ಶಕ್ತಿಕ್ಷಯಕಾರಿ. ರಕ್ತವನ್ನು ನೀರಾಗಿಸುತ್ತದೆ. 'ಕಾಫಿಯಿಂದ ಮೂರು ನಷ್ಟ, ಎರಡು ಲಾಭ' ಎಂದು ಒಂದು ಹಿಂದುಸ್ತಾನಿ ಗಾದೆಯಿದೆ. ಈ ಗಾದೆ ಸರಿಯೋ ತಪ್ಪೋ, ಎಷ್ಟುಮಟ್ಟಿಗೋ; ನಾನರಿಯೆ.

ಕೋಕೋ ವಿಷಯದಲ್ಲಿಯೂ ನನಗೆ ಇದೆ ಅಭಿಪ್ರಾಯ. ತಿಂದದ್ದನ್ನು ಸಹಜವಾಗಿ ಅರಗಿಸಿಕೊಳ್ಳುವವರಿಗೆ ಚಹಾ, ಕಾಫಿ, ಕೋಕೋ ಯಾವುದರ ಸಹಾಯವೂ ಬೇಡ. ಆರೋಗ್ಯವಂತನಿಗೆ ಸಾಧಾರಣ ಆಹಾರದಿಂದಲೆ ಸಮಸ್ತ ತೃಪ್ತಿಯೂ ಸಿಗುತ್ತದೆ. ಈ ಮೂರನ್ನೂ ನಾನು ಧಾರಾಳವಾಗಿ ಸೇವಿಸಿದ್ದೇನೆ, ಅವನ್ನು ಸೇವಿಸುತ್ತಿದ್ದಾಗ ನನಗೆ ಏನೋ ಒಂದು ಕಾಯಿಲೆಯಿದ್ದೇ ಇರುತ್ತದೆ ಅವನ್ನು ಬಿಟ್ಟುದ್ದರಿಂದ ನನಗೆ ಆದ ನಷ್ಟವೇನೂ ಇಲ್ಲ. ಲಾಭವೇ ಬೇಕಾದಷ್ಟು ಆಗಿದೆ. ಚಹಾ ಮೊದಲಾದ್ದರಿಂದ ಏನು ತೃಪ್ತಿ ಸಿಗುತ್ತಿತ್ತೋ ಕಾಯಿಪಲ್ಯದ ಸಾರಿನಿಂದಲೂ ಅದೇ ತೃಪ್ತಿ ನನಗೆ ಸಿಗುತ್ತದೆ. ಬಿಸಿ ನೀರಿಗೆ ಜೇನುತುಪ್ಪ, ನಿಂಬೆಯ ಹಣ್ಣಿನ ರಸಗಳನ್ನು ಬೆರೆಸಿದರೆ ಸೊಗಸಾದ ಆರೋಗ್ಯಕರ, ಪುಷ್ಟಿಕರ ಪಾನೀಯವಾಗುತ್ತದೆ. ಕಾಫಿ ಚಹಾಗಳಿಗೆ ಪ್ರತಿಯಾಗಿ ಬಳಸಬಹುದು.



ಶ್ರೀ ಗುರು ಬಸವಲಿಂಗಾಯನಮಃ

# ಸ್ತೋತ್ರ

ಅವಾಚ್ಯಾತ್ಮ ಸ್ವರೂಪಾಯ ಶಿವಭಾವ ಪ್ರದಾಯಿನೇ
ನಮಃ ಸದ್ಗುರುನಾಥಾಯ ಷಟ್‌ಸ್ಥಲಬ್ರಹ್ಮಮೂರ್ತಯೇ ॥

ಸರ್ವಲೋಕೋಪಕಾರಾಯ ಯೋದೇವಃ ಪರಮೇಶ್ವರಃ
ಚರತ್ಯತಿಥಿರೂಪೇಣ ನಮಸ್ತೇ ಜಂಗಮಾತ್ಮನೇ ॥

ಗುರುಸಿದ್ಧಲಿಂಗ ಕರುಣಾಪಾಂಗ ಭವಭಂಗ ।
ಗುರುಸಿದ್ಧಲಿಂಗೇಂದ್ರ ನತಜನಾಂಬುಧಿಚಂದ್ರ ।
ಗುರುಸಿದ್ಧಲಿಂಗಾರ್ಯ ವೀರವ್ರತಾಚಾರಚರ್ಯ ಸೌಂದರ್ಯ ವೀರ್ಯ ॥
ಗುರುಸಿದ್ಧಯತಿರಾಜ ಜಿತಮಾಯ ಚಿತ್ಕಾಯ ।
ಗುರಸಿದ್ಧಲಿಂಗಯ್ಯ ಯೋಗಿಜನಹೃಚ್ಛಯ್ಯ ।
ಗುರುಸಿದ್ಧಲಿಂಗೇಶ ಸುಜ್ಞಾನಸಂಕಾಶ ಜಯಾಜಯಾಕಾಶಕೇಶ ॥

—ಸಿದ್ಧೇಶ್ವರ ಪುರಾಣ

ಪರುಷತಾನಾದೊಡಂ ಸರಿಯಲ್ತು ನಿಮ್ಮಡಿಗೆ ।
ಪರುಷಂ ಸೋಂಕಿದ ಲೋಹ ಚಿನ್ನವಾಯ್ತುದರಂತೆ ।
ಪರುಷವೆನಿಸಿದುದಿಲ್ಲ ದೇವ ನಿಮ್ಮಂಘ್ರಿಯಂ ನೆರೆಪೊರ್ದಿದಧಮನರನು॥
ಗುರು ರೂಪನಪ್ಪನದರಿಂ ಪರಾತ್ಪರಮಹಿಮ ।
ಧರ ಜಿತೇಂದ್ರಿಯ ಪಾಲಿಸೆನ್ನ ಸದ್ಗುಣರನ್ನ ।
ದುರಿತಾಚಲಸ್ವರುವೆ ಗುರುವೆ ತೋಂಟದ ಸಿದ್ಧಲಿಂಗ ಮತ್ಕಲ್ಪ ತರುವೆ ॥

—ಭಾವರತ್ನಾಭರಣ

ದುರಿತತಮಃ ಪತಂಗನಮಳಾರ್ಥವಿವೇಚನಸತ್ಪ್ರಸಂಗನೀ ।
ಶ್ವರಲಸದಂತರಂಗನಭವಾಗಮವಾರಿಜ ದಿವ್ಯಭೃಂಗನ ।
ಕ್ಷರಪರಲಿಂಗ ಸಂಗನತಿಶಾಂತಿ ನಿರಸ್ತಜಡಾನುಷಂಗನೊ ।
ಲ್ದುರುತರ ಸಿದ್ಧಲಿಂಗಯತಿ ತುಂಗನೊಡರ್ಚುಗೆ ಸಜ್ಜನೇಷ್ಟಮಂ ॥

—ರಾಜಶೇಖರವಿಳಾಸ

ಶ್ರೀಮದ್ಬೋಧಸುಧಾಬ್ಧಿವರ್ಧನ ವಿಧುಂ ಮುಕ್ತ್ಯಂಗನಾವಲ್ಲಭಂ ।
ಸೋಮಾದಿ ಪೃಥ್ವಂತತತ್ತ್ವನಿವಹಕ್ಕಾದಾರರೂಪಂ ಪರಂ ।
ಸೀಮಾತೀತ ಸುಕೀರ್ತಿಯುಕ್ತಮಮಲಂ ಭಕ್ತೇಷ್ಟದಂ ಸದ್ಗುಣೋ ।
ದ್ದಾಮಂ ತೋಂಟದ ಸಿದ್ಧಲಿಂಗನೊಲವಿಂ ರಕ್ಷಿಪ್ಪುದೆಮ್ಮಂ ಸದಾ ॥

—ತೋಂಟದಾರ್ಯರಗಳೆ

ಜಗಜ್ಜಾಲಪಾಲಂ ಜನಸ್ತುತ್ಯಶೀಲಂ ।
ಭವಾರಣ್ಯದಾವಂ ಭೃತಸ್ವಾನುಭಾವಂ ।
ಶಿವಾನಂದಕೋಶಂ ದಿನೇಶಪ್ರಕಾಶಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥

ಕಲಾಸತ್ಕಲಾಪಂ ಕಪರ್ದಿಸ್ವರೂಪಂ ।
ಮನೋವೃತ್ತಿಶೂನ್ಯಂ ಮುನಿವ್ರಾತ್ರಮಾನ್ಯಂ ।
ಸಮುಂಚದ್ಗುಣಾಂಕಂ ಸದಾನಿಷ್ಕಳಂಕಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥

ಸ್ವತಂತ್ರಸ್ವಲೀಲಂ ಗಜೇಂದಾನುಕೂಲಂ ।
ಮಿಳನ್ಮೂಲಮಂತ್ರಂ ಪ್ರಣಿತೇಶತಂತ್ರಂ ।
ಶಿವಧ್ಯಾನಸಕ್ತಂ ಪರಾನಾದಿಮುಕ್ತಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥

ಪವಿತ್ರಾಭಿಧೇಯಂ ಪರಾಮ್ನಾಯಗೇಯಂ ।
ನಿರಸ್ತಾಂಗಜಾತಂ ಸುಧಾಸ್ಫೀತ ಗೀತಂ ।
ಪರಿಛಿನ್ನಪಾಶಂ ಸಮಸ್ತಾಮರೇಶಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥

– ಸಿದ್ಧಲಿಂಗಾಷ್ಟಕ

ಬಸವಪುರಾತನರ್ ಚರಿಸಿ ತೋರಿದ ಷಟ್‌ಸ್ಥಲಮಾರ್ಗದೊಳ್ ಪ್ರವ
ರ್ತಿಸುತಮನೂನಭಕ್ತಿರತಿಯಿಂ ತನುವಿತ್ತಮನಂಗಳಂ ಸಮ ।
ರ್ಪಿಸಿ ಗುರುಲಿಂಗಜಂಗಮಕೆ ವಂಚನೆಯಿಲ್ಲದೆ ಮಾಡಿ ಕೂಡಿ ರಾ ।
ಜಿಸುವ ಮಹಾತ್ಮರಂ ನೆನೆವುದೇ ಘನಮುಕ್ತಿಪದಂ ಶಿವಾಧವಾ ॥

– ಶತಕತ್ರಯ

# ಡಾ|| ಮೇಡಂ ಮೇರಿ ಮಾಂಟೆಸೋರಿ

ಶ್ರೀ ಹೆಚ್. ಮಹಾಲಿಂಗಪ್ಪ ಎಂ.ಎ,ಬಿ ಇಡಿ.
ಅಧ್ಯಾಪಕರು, ಸಿದ್ಧಗಂಗಾ ಶಿಕ್ಷಣ ಮಹಾವಿದ್ಯಾಲಯ, ತುಮಕೂರು.

## ಮಾಂಟೆಸೋರಿ ಪದ್ಧತಿಯ ಬೋಧನಾ ವಿಧಾನ

ಶಿಕ್ಷಣ ತಜ್ಞ ಫ್ರೋಬೆಲ್‌ನು ತನ್ನ ಶಾಲೆಗೆ „ಬಾಲೋದ್ಯಾನ" (kinder garten ) ಎಂದು ಕರೆದರೆ ಮಾಂಟೆಸೋರಿಯು ತನ್ನ ಶಾಲೆಗೆ "ಮಕ್ಕಳ ಮನೆ" (Childrens, house ) ಎಂದು ಕರೆದರು. ಇಲ್ಲಿ ಮಕ್ಕಳಿಗೆ ಮನೆಯ ವಾತಾವರಣ ಕಲ್ಪಿಸಿ ಮಗುವಿನ ಸ್ವಂತಿಕೆಯ ವಿಕಾಸಕ್ಕೆ ಅನುವಾಗುವಂತೆ ಕಲಿಸಲಾಗುತ್ತಿತ್ತು.

ಮಕ್ಕಳ ಮನೆಯು ಸಾಕಷ್ಟು ಸಂಖ್ಯೆಯ ಕೋಣೆಗಳನ್ನು ಹೊಂದಿದ ಹಾಗೂ ಉತ್ತಮವಾದ ತೋಟವಿರುವ ಶಾಲೆ ಆಟ, ಪಾಠ; ಊಟ, ಕೈ ಕೆಲಸ' ಮನರಂಜನೆ, ವಿಶ್ರಾಂತಿ ಮುಂತಾದ ಪ್ರತಿ ಚಟುವಟಿಕೆಗೂ ಪ್ರತ್ಯೇಕ ಕೋಣೆಗಳಿದ್ದವು. ಪ್ರತಿ ಕೋಣೆಯೂ ಅದರ ಉದ್ದೇಶಕ್ಕೆ ತಕ್ಕಂತೆ ಅನೇಕ ಸಾಮನು ಸಲಕರಣೆಗಳಿಂದ ಯೋಗ್ಯರೀತಿಯಲ್ಲಿ ಸುಸಜ್ಜಿತ ಗೊಳಿಸಲಾಗಿದ್ದುವು. ಈ ಎಲ್ಲ ಸಾಮಾನು ಸಲಕರಣೆಗಳನ್ನು ಗಮನವಿಟ್ಟು ಸಂರಕ್ಷಿಸುವುದು. ಇಲ್ಲಿನ ಮಕ್ಕಳ ಸ್ವಂತ ಹೊಣೆಗಾರಿಕೆ ಯಾಗಿರುತ್ತಿತ್ತು.

ಈ ಶಾಲೆಗೆ ಯಾವುದೇ ನಿಶ್ಚಿತ ವೇಳಾ ಪತ್ರಿಕೆ ಇರಲಿಲ್ಲ. ಏಕೆಂದರೆ ಇಲ್ಲಿನ ಕಾರ್ಯ ವಿಧಾನ ಕಲಿಸುವ ಘಟಕವಾಗಿರದೇ ಸಂಘಟನೆಯ ಅಂಗವಾಗಿತ್ತು. ಮಕ್ಕಳಿಗೆ ಯಾವುದೆ ರೀತಿಯ ಪುರಸ್ಕಾರ. ಶಿಕ್ಷೆಗಳು ಇಲ್ಲಿ ಇರಲಿಲ್ಲ, ತಮ್ಮ ಇಚ್ಛೆಗೆ ಅನುಗುಣವಾದ, ಅಭಿರುಚಿಗೆ ಯೋಗ್ಯವೆನಿಸುವ ತಮಗೆ ಒಲವಿರುವ ಚಟುವಟಿಕೆಗಳಲ್ಲಿ ಮಕ್ಕಳು ತೊಡಗಲು ಸರ್ವತಂತ್ರ ಸ್ವತಂತ್ರರು ತಮ್ಮ ಸಾಧನೆಯ ಅರಿವೇ ಅವರಿಗೆ ನೀಡಬಹುದಾದ ಪುರಸ್ಕಾರ ಸ್ವಯಂ ವಿಕಾಸಕ್ಕಾಗಿ ಹವಣಿಸುವುದೇ ಮಕ್ಕಳ ಅತ್ಯುನ್ನತವಾದ ಆನಂದ.

ಮಾಂಟೆ ಸೋರಿ ಬೋಧನಾ ವಿಧಾನವು ಮೂರು ರೀತಿಯ ಪ್ರಧಾನ ಚಟುವಟಿಕೆಗಳಿಂದ ರೂಪಿತವಾಗಿತ್ತು ಅವು ಈ ರೀತಿ ಇವೆ.

## 1 ದಿನ ನಿತ್ಯದ ಚಟುವಟಿಕೆಗಳ ಅಭ್ಯಾಸ :-

ಇಲ್ಲಿ ಮಕ್ಕಳು ದಿನನಿತ್ಯದ, ವ್ಯವಹಾರಿಕ ಜೀವನಕ್ಕೆ ಅವಶ್ಯವಾದ ಚಟುವಟಿಕೆಗಳನ್ನು, ವಿಷಯುಗಳನ್ನೂ ಅಭ್ಯಾಸ ಮಾಡುತ್ತಿದ್ದರೂ ಮಕ್ಕಳು ನಿಯಮಿತವಾಗಿ ತಮ್ಮ ಹಲ್ಲು, ಉಗುರು ಮುಂತಾದ ದೇಹದ ಅಂಗಾಂಗಳನ್ನು ಸ್ವಚ್ಛವಾಗಿರಿಸಿಕೊಳ್ಳುವ ಅಭ್ಯಾಸ. ತಲೆ ಬಾಚಿಕೊಳ್ಳುವುದು ತಮ್ಮ ಬಟ್ಟೆ ಬರೆಗಳನ್ನು ತಾವೇ ಒಗೆದುಕೊಳ್ಳುವುದು, ಹಾಸಿಕೊಳ್ಳುವುದು. ತೆಗೆದಿಡುವುದು, ಕೋಣೆಯನ್ನು ಓರಣವಾಗಿರಿಸುವುದು, 'ಬೂಟ್ ಪಾಲಿಶ್ ಮಾಡಿಕೊಳ್ಳುವುದು' ಹೀಗೆ ದಿನ ನಿತ್ಯದ ಎಲ್ಲ ಕೆಲಸಗಳನ್ನು ತಾವೇ ಮಾಡಿಕೊಳ್ಳುವಂತೆ ಮಾಡಿ, ಮಕ್ಕಳಲ್ಲಿ ಸ್ವಾವಲಂಬನೆಯ ಸ್ವಭಾವ ಬೆಳೆಸುವುದು. ತನ್ನ ಕುರ್ಚಿ, ಮೇಜು ಮುಂತಾದ ವಸ್ತುಗಳನ್ನು ತಾವೇ ಹಾಕಿಕೊಳ್ಳವುದು, ತೆಗೆದಿಡುವುದು, ಸರಿಮಾಡಿಕೊಳ್ಳುವುದು, ಅಚ್ಚುಕಟ್ಟಾಗಿ ಸ್ವಚ್ಛತೆಯನ್ನು ಕಾಪಾಡಿಕೊಳ್ಳುವುದು ಇದರಿಂದ ಸ್ನಾಯುಗಳ ಸಂವರ್ಧನೆಗೆ, ಬೇಕಾದ ವ್ಯಾಯಾಮ ದೊರೆಯುವುದರ ಜೊತೆಗೆ ಸ್ವಯಂ.ನಿರ್ವಹಣೆ ಮನೋಭಾವ ಬೆಳೆಸುವುದು ಇದರ ಗುರಿಯಾಗಿತ್ತು. ವಾಯು ಸೇವನೆ, ಕೈ ಕೆಲಸ, ವಸ್ತುಗಳ ಬಳಕೆ ಹಾಗೂ ಉಪಯೋಗ ಮುಂತಾದ ಚಟುವಟಿಕೆಗಳ ಅಭ್ಯಾಸ ನಡೆಸುವುದು ತಾಳ, ಲಯ ಹಾಗೂ ಪ್ರಾಸ ಬದ್ಧವಾಗಿ ಹಾಡುವುದನ್ನು ಕಲಿಸುವುದು, ಹೀಗೆ ಮಕ್ಕಳ ದಕ್ಷ ವ್ಯವಹಾರಿಕ ಜೀವನಕ್ಕೆ ಆವಶ್ಯ ತರಬೇತಿ ನೀಡಿ, ಅವರನ್ನು ಆರೋಗ್ಯವಂತರೂ ಹಾಗೂ ಉತ್ಸಾಹ ಶಾಲಿಗಳನ್ನಾಗಿ ಮಾಡುವುದು, ಈ ಮಕ್ಕಳ ಮನೆಯ ಹೊಣೆಗಾರಿಕೆ. ಮಕ್ಕಳನ್ನು, ಸಾಲಾಗಿ ನಡೆಯುವಂತೆ ಮಾಡಿ ಶಾರೀರಿಕ ಸಮತೋಲನವನ್ನು ಹಾಗೂ ಇನ್ನೂ ಇತರೆ ವ್ಯಾಯಾಮ ಚಟುವಟಿಕೆಗಳಿಂದ ದೈಹಿಕ ತರಬೇತಿ ನೀಡುವುದು ಇಲ್ಲಿನ ಕಾರ್ಯವಿಧಾನವಾಗಿತ್ತು.

## 2 ಇಂದ್ರಿಯುಗಳ ತರಬೇತಿ ನೀಡುವ ಅಭ್ಯಾಸ ಚಟುವಟಿಕೆಗಳು:-

ಮಾಂಟೆಸೋರಿಯವರ ಪ್ರಕಾರ ಮಾನಸಿಕ ಅದಕ್ಷತೆಗೆ ಇಂದ್ರಿಯಗಳಲ್ಲಿನ ಜಡತೆಯೇ ಮುಖ್ಯ ಕಾರಣ. ಆದ್ದರಿಂದ ಇಂದ್ರಿಯಗಳಿಗೆ ಸರಿಯಾದ ತರಬೇತಿ ನೀಡಿ ಅವು ದಕ್ಷತೆಯಿಂದ ಕಾರ್ಯ ಮಾಡುವ ಹಾಗೆ ಮಾಡಿ ಮಾನಸಿಕ ಬೆಳವಣಿಗೆಗೆ ಪ್ರಯತ್ನ ಮಾಡುವುದು, ಇಂದ್ರಿಯಗಳ ಜಾಗೃತಿಗೆ ಅನುಕೂಲವಾದ ಒಂದು ಉಪಕರಣವನ್ನು ತಯಾರು ಮಾಡಿದರು. ಇದರಿಂದ ಗಾತ್ರ, ಆಕಾರ, ತೂಕ, ಬಣ್ಣ ಮುಂತಾದುವುಗಳ ಬಗ್ಗೆ ಸರಿಯಾದ ಕಲ್ಪನೆಯನ್ನು ಬೆಳೆಸಲು ಅನುಕೂಲವಾಗಿತ್ತು.

ಸ್ಪರ್ಶ ಜ್ಞಾನ:- i ವಿವಿಧ ಉಷ್ಣತೆಯ ನೀರನ್ನು ಮುಟ್ಟುವಂತೆಮಾಡಿ ಉಷ್ಣತೆಯ ಕಲ್ಪನೆ ಬೆಳೆಸುವುದು.

ii ವಿವಿಧ ರೀತಿಯ ಒರಟುಳ್ಳ ಉಪ್ಪು ಕಾಗದಗಳ ಮೇಲ್ಮೈ ಮತ್ತು ವಿವಿಧ ನಯವಾದ ಮೇಲ್ಮೈಗಳನು ಮುಟ್ಟುವಂತೆ ಮಾಡಿ ಮೇಲ್ಮೈಗಳ ನುಣುಪಿನ ಕಲ್ಪನೆ ಬೆಳೆಸುವುದು.

iii ವಿವಿಧ ತೂಕದ ಮರದ ಘನಗಳನ್ನು ನೀಡಿ ಕೈನಿಂದ ತೂಕ ಅನುಭವಿಸಿ ತೂಕದ ಕಲ್ಪನೆ ಬೆಳೆಸುವುದು.

ದೃಶ್ಯ ಜ್ಞಾನ :- 1. ವಿವಿಧ ರೀತಿಯ ಎತ್ತರ, ವ್ಯಾಸಗಳುಳ್ಳ ಮರದ ಸಿಲಿಂಡರುಗಳನ್ನು, ವಿವಿಧ ಆಕಾರದ ಬ್ಲಾಕುಗಳನ್ನು ವೀಕ್ಷಿಸಿ ವ್ಯತ್ಯಾಸ ತಿಳಿಯುವುದರ ಮೂಲಕ ಆಕಾರ ಹಾಗೂ ಗಾತ್ರದ ಕಲ್ಪನೆ ಬೆಳೆಸುವುದು.

2. 64 ರೀತಿಯ ಬಣ್ಣಗಳುಳ್ಳ ಉಣ್ಣೆ ಬಟ್ಟೆಗಳ ವೀಕ್ಷಣೆಯಿಂದ ಬಣ್ಣದ ಕಲ್ಪನೆ ಬೆಳೆಸುವುದು.

ಶ್ರವ್ಯ ಜ್ಞಾನ:-

ಒಂದೊಂದು ಡಬ್ಬಿಯಲ್ಲಿ ಒಂದೊಂದು ರೀತಿಯ ಶಬ್ದ ಹೊರಡಿಸುವ ವಸ್ತುಗಳನ್ನು ಹಾಕಿ ಶಬ್ದ ವೈವಿದ್ಯತೆಯ ಕಲ್ಪನೆ ಬೆಳೆಸುವುದು.

ಹೀಗೆ ಅನೇಕ ರೀತಿಯ ಚಟುವಟಿಕೆಗಳ ಮೂಲಕ ಇಂದ್ರಿಯಗಳ ತರಬೇತಿಯನ್ನು ಮಕ್ಕಳಿಗೆ ಕಲಿಸುತ್ತಿದ್ದರು. ಮೊದಲು ಇಂದ್ರಿಯಾನುಭವಗಳ ಸಹಯೋಗದಿಂದ ವಸ್ತು ವಿಷಯಗಳನ್ನು ಅರಿಯುವುದು, ನಂತರ ಅವುಗಳನ್ನು ಗುರುತು ಹಿಡಿಯುವುದು ಅನಂತರ ಅವುಗಳನ್ನು ಸ್ಮರಿಸುವಂತೆ ಮಾಡಿ ಇಂದ್ರಿಯಗಳ ತರಬೇತಿ ನೀಡುವುದು ಇಲ್ಲಿನ ವಿಧಾನವಾಗಿತ್ತು.

3 ಓದು ಬರೆಹ ಹಾಗೂ ಗಣಿತ ಕಲಿಸುವ ಡೈಡಾಕ್ಟಿಕ್ ಉಪಕರಣಗಳ ಅಭ್ಯಾಸ.

ಓದು, ಬರೆಹ ಹಾಗೂ ಗಣಿತವನ್ನು ಮಕ್ಕಳಿಗೆ ಕಲಿಸಲು ಈ ರೀತಿಯ ಬೋಧನಾತ್ಮಕ ಉಪಕರಣಗಳನ್ನು ಬಳಸಲಾಗುತ್ತಿತ್ತು. ಓದುವುದಕ್ಕಿಂತ ಮೊದಲು ಬರವಣಿಗೆಯ ಅಭ್ಯಾಸ ನಡೆಯಬೇಕು ಕಾರಣ ಇದು ದೈಹಿಕ ಕ್ರಿಯೆ. ಆದ್ದರಿಂದ ಇದು ಮಕ್ಕಳಿಗೆ ಸುಲಭ, ಎಂದೇ ಇವರ ನಂಬಿಕೆ ಬರವಣಿಗೆಯನ್ನು ಮೊದಲು ಈ ರೀತಿ ಕಲಿಸುವುದು.

ಉಪ್ಪು ಕಾಗದದಲ್ಲಿ ಅಕ್ಷರಗಳನ್ನು ಕತ್ತರಿಸಿ ಅವನ್ನು ರಟ್ಟಿನ ಮೇಲೆ ಅಂಟಿಸುವುದು. ಈ ಉಪ್ಪು ಕಾಗದದ ಅಕ್ಷರಗಳನ್ನು ಬೆರಳಿನಿಂದ ನಯವಾಗಿ ಮಕ್ಕಳ ತಿದ್ದುವಂತೆ ಮಾಡುವುದು ಆ ನಂತರ ಸೀಸದ ಕಡ್ಡಿಯಿಂದ ಇದೇ ರೀತಿ ಬರೆಯಲು ತಿಳಿಸುವುದು. ಆನಂತರ ಅಕ್ಷರದ ಹೆಸರನ್ನೂ ಉಚ್ಚರಿಸುವಂತೆ ಮಾಡುವುದು.

ಅಕ್ಷರಗಳನ್ನು ತಿದ್ದುತ್ತಾ ಅವುಗಳ ಆಕಾರ ಹಾಗೂ ರೂಪಗಳನ್ನು ಅರಿಯುವುದರ ಮೂಲಕ ಹಾಗೆಯೇ ಬಾಯಿಂದ ಉಚ್ಚರಿಸಬೇಕಾದ ರೀತಿಯನ್ನು ಕಲಿಸಲಾಗುವುದು. ಇವನ್ನು ಪದೇ ಪದೇ ಉಚ್ಚರಿಸುವುದರಿಂದ ಉಚ್ಚಾರಣೆಯ ಕ್ರಮ ದೃಢವಾಗುತ್ತದೆ. ಇದೇ ಮುಂದೆ ಸ್ಪಷ್ಟವಾದ ಓದಿಗೆ ದಾರಿ ಮಾಡಿ ಕೊಡುವುದು.

ಲೋಹದ ಅಕ್ಷರದ ಚೌಕಟ್ಟುಗಳನ್ನು ತೆಗೆದು ಅವುಗಳನ್ನು ಕಾಗದದ ಮೇಲಿಟ್ಟು ಬಣ್ಣದ ಸೀಮೆ ಸುಣ್ಣದಿಂದ ಅಕ್ಷರದ ನಕ್ಷೆಯನ್ನು ಒಳ ಹಾಗೂ ಹೊರ ಮಗ್ಗಲು ಬರುವಂತೆ ಚಿತ್ರಿಸುವುದು, ಮಧ್ಯೆ ಖಾಲಿ ಉಳಿದ ಜಾಗವನ್ನು ಬೇರೆ ಬಣ್ಣದ ಸೀಮೆಸುಣ್ಣದಿಂದ ತುಂಬುವುದು. ನಂತರ ಪೆನ್ಸಿಲಿನಿಂದ ಆ ಅಕ್ಷರಗಳನ್ನು ಹೊರ ಬದಿಯನ್ನು ಒಳಗೆ ತುಂಬಿದ ಬಣ್ಣಕ್ಕೆ ಧಕ್ಕೆಯಾಗದಂತೆ ತೀಡುವುದು. ಇದರಿಂದ ಮಕ್ಕಳಿಗೆ ತಮ್ಮ ಪೆನ್ಸಿಲಿನ ಮೇಲೆ, ಕೈ ಬರಹದ ಮೇಲೆ ಸರಿಯಾದ ನಿಯಂತ್ರಣ ಹೊಂದಲು ಸಹಾಯಕವಾಗುವುದು.

**ಓದುವುದನ್ನು ಕಲಿಸುವ ಕ್ರಮ:-**

ಒಂದು ರಟ್ಟು ಅಥವಾ ಕಾಗದದ ತುಂಡಿನ ಮೇಲೆ ಓದಬೇಕಾದ ಪದಗಳನ್ನು ಬರೆದು ಪಕ್ಕದಲ್ಲಿ ಅದಕ್ಕೆ ಸಂಬಂಧಿಸಿದ ಚಿತ್ರ ಬರೆದಿರಬೇಕು. ನಿಧಾನವಾಗಿ ಪದವನ್ನು ಉಚ್ಚರಿಸುತ್ತಾ ಕ್ರಮೇಣ ಉಚ್ಚಾರದ ವೇಗವನ್ನು ಹೆಚ್ಚಿಸಬೇಕು. ಅದರ ಉಚ್ಚಾರವನ್ನು ಸರಿಯಾಗಿ ಕಲಿತ ನಂತರ ಅದರ ವಸ್ತು ಚಿತ್ರದ ಹತ್ತಿರ ಬರೆದ ಕಾಗದದ ತುಂಡನ್ನು ಇಡಲು ರೂಢಿ ಮಾಡುವುದು. ಇದರಂತೆಯೇ ಮುಂದೆ ವಾಕ್ಯಗಳನ್ನು ಓದಲು ಕಲಿಸುವುದು.

**ಗಣಿತ ಕಲಿಸುವ ಕ್ರಮ.**

ಓದು ಬರೆಹವನ್ನು ಸಾಕಷ್ಟು ಕಲಿತ ಮೇಲೆ ಅಂಕ ಗಣಿತದ ನಾಲ್ಕು ಮೂಲ ಭೂತ ಕ್ರಿಯೆಗಳನ್ನು ಕಲಿಸವುದು. ಇದಕ್ಕೆ ಹಳೆಯ ಕ್ರಮವನ್ನೇ ಅನುಸರಿಸುವುದು. ಬಣ್ಣದ ಗೋಲಿಗಳು, ಅಂಕಿಗಳುಳ್ಳ ಕೋಲುಗಳು, ಉಪ್ಪು ಕಾಗದದ ಅಂಕಿಗಳು, ಮರದ ತುಂಡುಗಳು, ಸಾದಾಡಬ್ಬಿಗಳು ಮುಂತಾದ ಆಕರ್ಷಕ ವಸ್ತುಗಳಿದ ಅಂಕ ಗಣಿತ ಕಲಿಸುವ ಪ್ರಯತ್ನ ಮಾಡುವುದು.

ಸಾಮಾನ್ಯವಾಗಿ ಸಂಕಲನ, ವ್ಯವಕಲನ, ಗುಣಾಕಾರ ಹಾಗೂ ಭಾಗಾಕಾರಗಳನ್ನು ಲಾಂಗ್ ಸ್ಟೇರ್ (long stair) ಎಂಬ ಉಪಕರಣದಿಂದ ಕಲಿಸುವುದು. ಇದು ಉದ್ದದಲ್ಲಿ ವ್ಯತ್ಯಾಸವಿರುವ ಹತ್ತು ಕೋಲುಗಳು ಒಂದು ಕಟ್ಟು ಪ್ರತಿಯೊಂದು ಮತ್ತೊಂದಕ್ಕಿಂತ ಒಂದು ಡೆಸಿಮೀಟರ್ ನಷ್ಟು ಹೆಚ್ಚು ಪ್ರತಿಕೋಲಿಗೂ ಕೆಂಪು ಮತ್ತು ನೀಲಿ ಬಣ್ಣಗಳ ಲೇಪನ ವಿರುವುದು. ಈ ವಿಧಾನದಿಂದ ಗಣಿತ ಕಲಿಸು ಕ್ರಮವಿರುವುದು.

ಇದರ ಜೊತೆಗೆ ಪ್ರಾಣಿ ಹಾಗೂ ಸಸ್ಯಗಳನ್ನು ಬೆಳಸಿ, ಪೋಷಿಸುವ ಜವಾಬ್ದಾರಿ ಮಕ್ಕಳಿಗೆ ವಹಿಸುವುದು ಇದರಿಂದ ತಾಳ್ಮೆ, ದಯೆ ಹಾಗೂ ಶ್ರದ್ಧಾ ಭಕ್ತಿಗಳು ಮಕ್ಕಳಲ್ಲಿ ಬೆಳಸಲು ಪ್ರಯತ್ನಿಸುವುದು. ಇದು ಮಾಂಟಿಸೋರಿ ಪದ್ಧತಿಯ ಬೋಧನಾ ವಿಧಾನದ ಸೂಕ್ಷ್ಮ ಪರಿಚಯ.

ಇಲ್ಲಿ ಶಿಕ್ಷಕರು ಮಾತ್ರ ಪ್ರಜ್ಞಾಪೂರ್ವಕವಾಗಿ, ನಿಯಂತ್ರಿತ ಹಾಗೂ ಸುವ್ಯವಸ್ಥಿತ ಮಾರ್ಗದರ್ಶನ ನೀಡಲು ಸಮರ್ಥರಿರಬೇಕು, ಹಾಗೂ ಅನುಭವಿಯೂ ಆಗಿರಬೇಕು. ಶಿಕ್ಷಕರಿಗೆ ಇಲ್ಲಿ ನಿರ್ದೇಶಕರು ಎಂದೇ ಹೆಸರು. ಇವರು ಮಕ್ಕಳ ಮನಶ್ಶಾಸ್ತ್ರ ಅರಿತು ಮಕ್ಕಳ ಮನಸ್ಸಿಗೆ ತಕ್ಕಂತೆ ನಡೆಯುವ ಸಹೃದಯಿಗಳಾಗಿರಬೇಕು.

"Virtues and not words, are the main qualifications of the teacher. He she should be partly a scientist, partly a doctor and completely religious" ಎಂದು ಶಿಕ್ಷಕರ ಬಗ್ಗೆ ಹೇಳಿದ್ದಾರೆ.

ಮಾಂಟಿಸೋರಿಯವರ ವಿಚಾರಗಳು ಹೆಚ್ಚಿನ ಮಟ್ಟಿಗೆ ಕೆಳಹಂತದ ಶಿಕ್ಷಣಕ್ಕೆ ಸೀಮಿತವಾಗಿದ್ದರೂ ಅಂದಿನ ಶಿಕ್ಷಣ ಕ್ರಮಕ್ಕೆ ಹೊಸ ಆಯಾಮಗಳನ್ನು ನೀಡಿ ಇಂದಿನ ಉತ್ತಮ ಶೈಕ್ಷಣಿಕ ವಿಚಾರಗಳಿಗೆ ಬುನಾದಿಯಾಗಿವೆ. ಇವರ ವಿಚಾರಧಾರೆಗಳಲ್ಲಿನ ಅನೇಕವನ್ನು ಇಂದಿಗೂ ಆಚರಿಸುವುದು ಅವಶ್ಯವಾಗಿದೆ ಎಂದು ಇಂದಿನ ಶಿಕ್ಷಣದ ರೀತಿ-ನೀತಿಗಳನ್ನರಿತ, ಯಾರಿಗಾದರೂ ತಿಳಿಯುವುದು. ಇವರ ಉನ್ನತವಾದ ಅರ್ಥ, ಗುರಿಗಳು ಮತ್ತು ಮನಶ್ಶಾಸ್ತ್ರಾಧಾರಿತ ಶಿಕ್ಷಣ ಕ್ರಮಗಳು ನಮಗೆ ಎಂದೂ ದಾರಿದೀಪವಾಗಿರಲಿ, ಎಂಬುದೇ ನಮ್ಮ ಹಾರೈಕೆ.

# ಶ್ರೀ ಸಿದ್ಧಗಂಗಾ ಕ್ಷೇತ್ರ,

ಸಿದ್ಧಗಂಗಾ ಕ್ಷೇತ್ರವು ಪೂಜ್ಯ ಮಹಾ ಸ್ವಾಮಿಗಳವರ ತ್ಯಾಗ, ತಪಸ್ಸು, ವೈರಾಗ್ಯಗಳಿಂದ ತನ್ನದೇ ಆದ ವಿಶಿಷ್ಟಸ್ಥಾನ ಪಡೆದಿದೆ " **ಘಟದಿಂದ ಮಠ** " ಎಂಬುವ ನಾನ್ನುಡಿಯಂತೆ ಪೂಜ್ಯ ಮಹಾ ಸ್ವಾಮಿಗಳವರ ಘನ ವ್ಯಕ್ತಿತ್ವ. ಅನಾದೃಶ್ಯ ಕರ್ತೃತ್ತ್ವ ಶಕ್ತಿ, ಅನುಪಮ ಅಂತಃ ಕರಣದಿಂದ ಮಾನವ ಕುಲಕ್ಕೇನೇ ಭೂಷಣ ತಂದಿದ್ದಾರೆ. ಪೂಜ್ಯ ಸ್ವಾಮಿ ವರ್ಗಕ್ಕೇನೇ ಮಾರ್ಗ ದರ್ಶಕರಾಗಿದ್ದಾರೆ. ಅವರು ಬಹುದೊಡ್ಡ ಇತಿಹಾಸವನ್ನೇ ನಿರ್ಮಿಸಿ, ಜೀವಿಸಿರು ವಾಗಲೇ ನಿತ್ಯರಾಗಿದ್ದಾರೆ, ಚಿರಾಯುಗಳಾಗಿದ್ದಾರೆ.

ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳಂತಹ ಜ್ಞಾನಿ, ನಿಗರ್ವಿ, ತ್ರಿವಿಧ ದಾಸೋಹಿ ಸ್ವಾಮಿಗಳು, ಶ್ರೀಗಳವರ ಪ್ರಭಾವವನ್ನು ನೋಡಿ ವಿಸ್ಮತ ನಾದೆ. ಸಮಾಜದ ಭಾಗ್ಯ ನಿಧಿ ಎಂದು ನನ್ನ ನಂಬಿಕೆ, ಇಡೀ ವಿಶ್ವದಲ್ಲಿಯೇ ಅಪರೂಪ, ಇಂಥವರನ್ನು ಹೊಂದಿದ ಕನ್ನಡ ನಾಡು ಭಾರತ ದೇಶ ಧನ್ಯವೆಂದು ಹೇಳುತ್ತೇನೆ.

ಶಿವನ ಅವತಾರಿಗಳಲ್ಲೊಬ್ಬರಾಗಿ ಮೆರೆದು, ಧರ್ಮ ಪರಂಪರೆಯನ್ನು ಕಾಪಾಡಿ ಕೊಂಡುಬಂದು, ಸದ್ಭಕ್ತರಿಗೆ ಸನ್ ಮಾರ್ಗಿಗಳಾಗಿ, ಭಕ್ತ ಜನಗಳ ಆಸೆ ಆಕಾಂಕ್ಷೆಗಳನ್ನು ಈಡೇರಿಸುತ್ತಾ, ತಮ್ಮ ತಪಸ್ಸನ್ನು ಭಕ್ತ ಜನಗಳಿಗೆ ಹಂಚಿ, ಪವಾಡ ಪುರುಷರಾಗಿ ಶ್ರೀ ಸಿದ್ಧಲಿಂಗ ಮಹಾ ಸ್ವಾಮಿಗಳವರ ಸುಕ್ಷೇತ್ರದಲ್ಲಿ ತಿವಿಧ ದಾಸೋಹ ಮೂರ್ತಿಗಳಾದ **ಡಾ|| ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರಿಗೆ** ನನ್ನ ಭಕ್ತಿ ಪೂರ್ವಕ ನಮುಸ್ಕಾರಗಳು.

– **ಎಸ್. ನಾಗರಾಜಯ್ಯ**, Bsc.
ಐ.ಡಿ.ಹಳ್ಳಿ, ಮಧುಗಿರಿ ತಾ||

## ಸಿದ್ಧಗಂಗಾ ಹಳೆಯ ವಿದ್ಯಾರ್ಥಿ ಸಂಘದ "ಆಜೀವ ಸದಸ್ಯತ್ವದ" ಪಟ್ಟಿ.

ಸರ್ವಶ್ರೀ :–

295 ಕುಮಾರಸ್ವಾಮಿ, ಉಪಾಧ್ಯಾಯರು, ಮಂಜುನಾಥ ಬಾಲಕಿಯರ ಪ್ರೌಢಶಾಲೆ, ನೆಲಮಂಗಲ, ಬೆಂಗಳೂರು ಜಿಲ್ಲೆ.

296 ಆನಂದಪ್ಪ, ಅಮರಾವತಿ ಲೇಔಟ್, ಬಂಗಾರಪೇಟೆ, ಕೋಲಾರಜಿಲ್ಲೆ

297 ಹೆಚ್.ಎಸ್. ಚಂದ್ರಣ್ಣ, ಕಂಟ್ರಾಕ್ಟರ್, ಕಡಗತ್ತೂರು ಮತ್ತು ಅಂಚೆ, ಮಧುಗಿರಿ ತಾ||

298 ಆರ್. ಸಿ. ದೇವರಾಜು, S/o ಚನ್ನಮಲ್ಲಯ್ಯ, ರಾಯರಕೊಪ್ಪಲು ಮತ್ತು ಅಂಚೆ, ಆಲೂರು ತಾ||

299 ಹೆಚ್. ಬಿ. ನಂಜುಂಡಯ್ಯ, C/o ಶ್ರೀಮತಿ ಗೌರಮ್ಮ ಎಂ.ಜಿ.ಎಂ. ಬಾಲಕಿಯರ ಪ್ರೌಢಶಾಲೆ, ಮಧುಗಿರಿ ಟೌನ್.

300 ಎಂ. ಆರ್. ವೀರಭದ್ರಯ್ಯ, ಮುಖ್ಯಗುರುಗಳು, ಪ್ರಾಥಮಿಕ ಬಾಲಕರ ಶಾಲೆ, ಬಿಜವಾರ ಮತ್ತು ಅಂಚೆ, ದೇವನಹಳ್ಳಿ ತಾ||

301 ಸಿದ್ಧಗಂಗಪ್ಪ, ಮುಖ್ಯಗುರುಗಳು, ಪ್ರಾಥಮಿಕ ಬಾಲಕರ ಶಾಲೆ, ಸಾಕ್ಷಿಹಳ್ಳಿ, ತುಪ್ಪದಕೋಣ, ಅಂಚೆ, ಶಿರಾ ತಾಲ್ಲೂಕು.

302 ಕೆ. ಸಿದ್ಧಯ್ಯ, S/o ಸಂಪಯ್ಯ, ಉಪಾಧ್ಯಾಯರು, ಕುರುಗುಂದ, ಸಾಸಲು ಅಂಚೆ, ತುಮಕೂರು ತಾ||

303 ಆರ್. ಪಿ. ಮಾನಚಾರಿ, ಉಪಾಧ್ಯಾಯರು, ಸರ್ಕಾರಿ ಪ್ರಾಥಮಿಕ ಶಾಲೆ, ಹಳ್ಳದಕೆರೆ, ಹರಿಹರ ಟೌನ್–577601

304 ಆರ್. ಎಂ. ಬಿ ಆರಾಧ್ಯ, ಮೇನೇಜಿಂಗ್ ಪಾರ್ಟ್‌ನರ್ ಶ್ರೀ ಮುರುಗರಾಜೇಂದ್ರ ಎಂಟರ್ ಪ್ರೈಸರ್ಸ್, ನಂ. 26, ಮಾಧವನಗರ. ಬೆಂಗಳೂರು–560001

305 ಶ್ರೀ ಜಿ.ಬಿ. ಹೊನ್ನಪ್ಪ ಪ್ರಾಂಶುಪಾಲರು, ಸರ್ಕಾರಿ ಕಿರಿಯ ಕಾಲೇಜು, ದೊಡ್ಡಬೆಳವಂಗಲ ಮತ್ತು ಅಂಚೆ, ದೊಡ್ಡಬಳ್ಳಾಪುರ ತಾ||

306 ಜಿ.ಆರ್. ಚಂದ್ರಶೇಖರಯ್ಯ ಬಿಟ್ಟಸಂದ್ರ, ಯಣ್ಣಗೆರೆ ಅಂಚೆ, ಮಾಗಡಿ ತಾ||

ಕವಿಕಾಣಿಕೆ

# ಶ್ರೀ ಶಿವಕುಮಾರೇಶ ರಕ್ಷಿಪ್ಪುದೆಮ್ಮಂ

ಶ್ರೀ ಸಿದ್ಧಲಿಂಗೇಶ್ವರನ ಪಾದರಜದಿಂದತೀವ ಪಾವನವೆನಿಸಿರ್ಪ
ಶ್ರೀ ಸಿದ್ಧೇಶ್ವರ ಕೃಪಾದೃಷ್ಟಿಯಿಂದ ತೀವ ಪೂತಮೆನಿಸಿರ್ಪ
ಶ್ರೀ ಸಿದ್ಧಶಿವಯೋಗಿಪುಂಗವರ ವಾಸದಿಂದತೀವ ಪುಣ್ಯವೆನಿಸಿರ್ಪ
ಶ್ರೀ ಸಿದ್ಧಗಂಗಾಕ್ಷೇತ್ರಾದಿಪನೆ ಶ್ರೀ ಶಿವಕುಮಾರೇಶ ರಕ್ಷಿಪ್ಪುದೆಮ್ಮಂ ||೧||
ಆವ ಮಾಪುಣ್ಯಕ್ಷೇತ್ರದಧಿಪತಿಯಾಗಿ ರಾಜಿಸಿರ್ಪೆಗುರುದೇವ
ಆವ ಮಾಪುಣ್ಯಕ್ಷೇತ್ರಕ್ಕಾಧಾರವಾಗಿನೀಂ ವಿರಾಜಿಸಿರ್ಪೆ. ಗುರುದೇವ
ಆವ ಮಾಪುಣ್ಯಕ್ಷೇತ್ರಮಂ ಪಾದರಜದಿಂಪಾವನಂಗೊಳಿಸಿರ್ಪೆದೇವ
ಆವ ಪುಣ್ಯಮೂರ್ತಿನೀನೆಲೆಗೆ ಶ್ರೀ ಶಿವಕುಮಾರೇಶ ರಕ್ಷಿಪ್ಪುದೆಮ್ಮಂ ||೨||
ಶಿಷ್ಯತಾನಾಗಿರುತಿರ್ದು ಸಿದ್ಧಶ್ರೀ ಉದ್ದಾನ ಶಿವಯೋಗಿವರ್ಯನಿಗೆ
ಶುಶ್ರೂಷೆಯಂ ಮಾಡುತ್ತಲತ್ಯುಚ್ಛಶ್ರದ್ಧಾಭಕ್ತಿಯಿಂ ತನುಸವೆಸಿ ನೀ ಸತ್
ಶಿಷ್ಯನೆಂದೆಂಬ ಕೀರ್ತಿಯಂ ಪಡೆದ ಮಹಾಮಹಿಮನಾಗಿರ್ದು ಜಗದಿ
ಶಿಷ್ಯವಾತ್ಸಲ್ಯಮಯಿಯಾಗಿರ್ಪ ಶ್ರೀ ಶಿವಕುಮಾರೇಶ ರಕ್ಷಿಪ್ಪುದೆಮ್ಮಂ ||೩||
ಗುರುಪುಂಗವರೊಳಗ್ರಗಣ್ಯನಾಗಿರ್ಪೆ. ಮಹಾಮಹಿಮಶಿವಯೋಗಿ
ಗುರುಪೆಸರಂಪೆತ್ತ ಪರಮೇಶ್ವರಂ ನಿನಾಗಿರ್ಪೆ ಸಿದ್ಧಶಿವಯೋಗಿ
ಗುರುವೆಂಬಭಿಧಾನಮಂ ಅನ್ವರ್ಥಗೊಳಿಸಿರ್ಪೆನೀಂ ಮಹಾಶಿವಯೋಗಿ
ಗುರುವೆ ಸದ್ಗುರುವೆ ಶ್ರೀ ಗುರುವೆ ಶ್ರೀ ಶಿವಕುಮಾರೇಶ ರಕ್ಷಿಪ್ಪುದೆಮಂ ||೪||
ಅನ್ನದಾನಂ ಪಿರಿದಪ್ಪುದೆಂಬ ತತ್ವದಾನನ್ನಿ ಯನವಧರಿಸಿ ನೀಂ
ಅನ್ನದಾನಮಂ ಪಿರಿದಾಗಿ ಧರೆಯೊಳಗೆಸಗುತಿರ್ಪನ್ನದಾನಿ ನೀಂ
ಅನ್ನದಾನದಿಂ ಭೂತಸಂದೋಹಮಂ ತೃಪ್ತಿಬಡಿಸುತ್ತಲಿರುತಿರ್ಪೆ ನೀಂ
ಸನ್ನುತನೆ ಶಿವಯೋಗಿ ಶ್ರೀ ಶಿವಕುಮಾರೇಶ್ವರನೆ ರಕ್ಷಿಪ್ಪುದೆಮ್ಮಂ ||೫||

ವಿದ್ಯಾದಾನ ಮದುವೆ ಅನ್ನ ದಾನದಿಂದಧಿಕವೆಂಬುದಂ ನೀಂ ತಿಳಿದು
ವಿದ್ಯೆಯೇ ಸಕಲ ಸಂಪದ್ವಿನಯಕ್ಕಾಧಾರಮೆಂಬುದನೀ ತಿಳಿದು .
ವಿದ್ಯೆಯಿಂದಲೇ ಮೋಕ್ಷನಶವರ್ತಿ ತಾನಹುದೆಂಬುದದಂನೀಂ ತಿಳಿದು
ವಿದ್ಯಾದಾನಿನೀಗಿರುತಿರ್ಪೆ ಶ್ರೀ ಶಿವಕುಮಾರೇಶ ರಕ್ಷಿಪ್ಪುದೆಮ್ಮಂ ೬॥

ವಿದ್ವಜ್ಜನಕ್ಕಾಧಾರ ವಿದ್ಯೆಗೂ ಅಧಾರಭೂತ ಗುರು ನೀನಾಗಿರುವೆ
ವಿದ್ವಜ್ಜನ ಮಾನ್ಯಂ ವಿದ್ವಜ್ಜನಭೂಷಣಮಾದಗುರು ನೀನಾಗಿರುವೆ,
ವಿದ್ವಜ್ಜನ ಪ್ರೇಮಿ, ವಿದ್ವಜ್ಜನಸ್ತುತ್ಯನಾಗಿರ್ಪ ಗುರುನೀನಾಗಿರುವೆ
ವಿದ್ವಜ್ಜನಾಗ್ರಗಣ್ಯನಾಗಿರ್ಪೆ ಶ್ರೀ ಶಿವಕುಮಾರೇಶ ರಕ್ಷಿಪ್ಪುದೆಮ್ಮಂ ॥೭॥

ನವಯೌವನದೊಳನೀಂ ಸಂಸಾರಸುಖಭೋಗಂಗಳನಪೇಕ್ಷಿಸದೆ
ನವತಾರುಣ್ಯದಾಕಾಂಕ್ಷೆಗಳನೆಲ್ಲಮುಂ ತೃಣಕೆಣೆಮಾಡಿ ತ್ಯಜಿಸಿ
ವಿವಿಧಚಾಪಲ್ಯಗೊಳಗಾಗಿಸುವ ಸಕಲೇಂದ್ರಿಯಂಗಳಂ ಜಯಿಸಿ
ದಿವ್ಯ ಸಂನ್ಯಾಸಕ್ಕೊಲಿದ ಶ್ರೀ ಶಿವಕುಮಾರೇಶ್ವರನೆ ರಕ್ಷಿಪ್ಪುದೆಮ್ಮಂ ॥೮॥

ಪರಮೇಶ್ವರಂ ತಾನೊಲಿದು ನರರೂಪಮಂ ಧರಿಸಿರ್ಪತೆರನಂತೆ
ಪರಜಂಗಮುದವೇಷಮಂ ಧರಿಸಿ ಧರೆಯೊಳ್ಚರಿಸುತಿರುವಂತೆ
ನರರಂಭವಸಾಗರದೆ ಮುಳುಗಿ ಬಳಲಿ ತೊಳಲುತ್ತಿರ್ಪವರಂ
ಭರದಿಂದಲುದ್ಧರಿಸಲ್ಬಂದ ಶ್ರೀ ಶಿವಕುಮಾರೇಶ ರಕ್ಷಿಪ್ಪುದೆಮ್ಮಂ ॥೯॥

ವಿದ್ವಾನ್ ಹೆಚ್. ಸದಾಶಿವಯ್ಯ

# ಕ್ಷೇತ್ರವಾರ್ತೆ

ಪಿ. ಎಸ್. ಚಂದ್ರಶೇಖರಯ್ಯ

ದಿನಾಂಕ 1 . 9 . 88 ರಂದು ಬೆಳಿಗ್ಗೆ 10 . ಘಂಟೆಯಲ್ಲಿ S . I . T . — ಸಮಾರಂಭದಲ್ಲಿ ಭಾಗವಹಿಸಿದ್ದರು. ಬಿರ್ಲಾ ಸಂಭಾಂಗಣದಲ್ಲಿ 1988 ನೆಯ ವರ್ಷದ ಪ್ರಥಮವರ್ಷದ ಇಂಜಿನಿಯರ್ ವಿದ್ಯಾರ್ಥಿಗಳು ಮತ್ತು ಪೋಷಕರ ಸಮಾವೇಶ. ಪ್ರತಿವರ್ಷದಂತೆ ಪ್ರಥಮವರ್ಷದ ವಿದ್ಯಾರ್ಥಿಗಳನ್ನು ಹಾರ್ದಿಕವಾಗಿ ಬರುಮಾಡಿಕೊಳ್ಳುವ ಈ ಸಮಾರಂಭವನ್ನುದ್ದೇಶಿಸಿ ಪ್ರಾಂಶುಪಾಲರಾದ ಜಿ. ಪರಮೇಶ್ವರಪ್ಪನವರು ಮಾತನಾಡಿ S . I . T ಸಂಸ್ಥೆಯು ರಜತಮಹೋತ್ಸವ ಆಚರಿಸುವ ಸಿದ್ಧತೆಯಲ್ಲಿದೆ. 25 ವರ್ಷಗಳ ಸೇವೆಸಲ್ಲಿಸಿದ ನಮ್ಮ ಸಂಸ್ಥೆಯು ರಾಷ್ಟ್ರದಲ್ಲಿಯೇ ಉತ್ತಮ ಸ್ಥಾನ-ಗಳಿಸಿದೆ ಎಂದರು.

ಅಂತಿಮ ವರ್ಷದ ಇಬ್ಬರು ವಿದ್ಯಾರ್ಥಿಗಳು ತಮ್ಮ ಅನುಭವವನ್ನು ವ್ಯಕ್ತಪಡಿಸುತ್ತಾ ಇಡೀ ಕರ್ನಾಟಕ ರಾಜ್ಯದಲ್ಲಿಯೇ ಉತ್ತಮ ವಸತಿ ಸೌಕರ್ಯ ಆದರ್ಶವಾದ ಆಡಳಿತವರ್ಗ ನುರಿತ ಅಧ್ಯಾಪಕವರ್ಗ ಪ್ರಶಾಂತವಾತಾವರಣದಿಂದ ಕೂಡಿದ ಈ ವಿದ್ಯಾಸಂಸ್ಥೆ ತನ್ನದೇ ಆದ ವರ್ಚಸ್ಸಿನಿಂದ ಕೂಡಿದೆ. ಇಲ್ಲಿ ಯಾವ ವಿಧವಾದ ಭಯದವಾತಾವಣ ವಿಲ್ಲ - ಹೊಸದಾಗಿ ಬರುವವರಿಗೆ ಆನಂದದ ಸನ್ನಿವೇಶ ಎಂದರು.

ಪೋಷಕರ ಪರವಾಗಿ ಮಾತನಾಡಿದ ಇಬ್ಬರು ಮಹನೀಯರು ಸಂಸ್ಥೆಯ ಸೇವೆಯನ್ನು ಮುಕ್ತಮನಸ್ಸಿನಿಂದ ಪ್ರಶಂಸೆ ಮಾಡಿದರು. ಆಂಧ್ರವರಾದ ನಮ್ಮನ್ನು ಈ ಸಂಸ್ಥೆ ಹಾರ್ದಿಕವಾಗಿ ಸ್ವಾಗತಿಸಿದೆ ಎಂದರು.

ಪೂಜ್ಯ ಶ್ರೀಗಳವರು ಆಶೀರ್ವಚನ ನೀಡುತ್ತಾ ಸಂಸ್ಥೆಯು ನಾಡಿನಾದ್ಯಂತ ಕೀರ್ತಿ ಸಂಪಾದಿಸಲು ನುರಿತ ಅಧ್ಯಾಪಕರ ಸೇವೆ ಸ್ಮರಿಸುತ್ತಾ ರಾಷ್ಟ್ರನಿರ್ಮಾಣ ಕಾರ್ಯದಲ್ಲಿ ಎಲ್ಲ ಯುವಕರು ಶ್ರಮವಹಿಸಬೇಕು. ಮಹಾತ್ಮ ಗಾಂಧಿಯವರು ಬಯಸಿದ ಭಾರತನಿರ್ಮಾಣದಲ್ಲಿ ನಿರತರಾಗಬೇಕು. ನಾವು ಭಾರತೀಯರು. ಜಗತ್ತಿನಲ್ಲಿ ನಮ್ಮ ರಾಷ್ಟ್ರದ ಸ್ಥಾನ ಹಿರಿದು ಅದರ ಉಳಿವು ಅಳಿವು ನಮ್ಮ ಯುವಕರನ್ನವಲಂಬಿಸಿದೆ ಕಷ್ಟಪಟ್ಟು ಅಧ್ಯಯನ ಮಾಡಿ ಪ್ರಾಮಾಣಿಕವಾದ ಜೀವನ ಸಾಗಿಸಬೇಕು. ರಾಷ್ಟ್ರ ವ್ಯಾಪ್ತಿ ಇರುವ ಎಲ್ಲವಿದ್ಯಾರ್ಥಿಗಳೂ ರಾಷ್ಟ್ರೀಯ ಭಾವೈಕ್ಯದಿಂದ ಅಹಿತಕರ ವಾತಾವರಣಕ್ಕೆ ಆಸ್ಪದ ಕೊಡದಂತೆ ಅಧ್ಯಯಾನ ಮಾಡಬೇಕೆಂದರು.

ದಿನಾಂಕ 26–9 88ರಂದು ಸೋಮವಾರ ಬೆಳಿಗ್ಗೆ 10-30ಕ್ಕೆ ಸಿದ್ಧಗಂ
ತಾಂತ್ರಿಕ ಮಹಾವಿದ್ಯಾಲಯದ ಆವರಣದಲ್ಲಿ ಸಿದ್ಧಗಂಗಾ ವಿದ್ಯಾಸಂಸ್ಥೆ
ವತಿಯಿಂದ "ಸಿದ್ಧಗಂಗಾ ಪಾಲಿಟೆಕ್ನಿಕ್" ನೂತನವಾಗಿ ಆರಂಭ ಮಾಡಲಾಯಿತ

ಕರ್ನಾಟಕ ರಾಜ್ಯದ ಸಮಾಜ ಕಲ್ಯಾಣ ಇಲಾಖೆ ಸಚಿವರಾದ ಸನ್ಮಾ
ಶ್ರೀ ಪಿ. ಜಿ. ಆರ್. ಸಿಂಧ್ಯರವರು ಉದ್ಘಾಟನೆ ಮಾಡುತ್ತ ಶ್ರೀ ಶಿವಕುಮಾರ ಸ್ವಾ
ಗಳವರು ಸಿದ್ಧ ತಪಸ್ವಿಗಳು. ಅವರ ಮಾರ್ಗದರ್ಶನದಲ್ಲಿ ನಡೆಯುತ್ತಿರುವ ಎ
ಸಂಸ್ಥೆಗಳು ಉತ್ತಮವಾಗಿ ಕಾರ್ಯನಿರ್ವಹಿಸುತ್ತಿವೆ. ಮೇಲಾಗಿ ತಾಂತ್ರಿಕ ಮಹ
ವಿದ್ಯಾಲಯಕ್ಕೆ ಅದರ ಸುವ್ಯವಸ್ಥೆಯ ಬಗ್ಗೆ ತೃಪ್ತಿಗೊಂಡು ಅದು ರಾಷ್ಟ್ರವ್ಯಾಪಿ
ಯಾಗಿದೆ. ಇದರ ಫಲವಾಗಿ ಇಂದು ಹೊರನಾಡುಗಳಲ್ಲಿ ಭಾರತೀಯ ಎಂಜಿನಿ
ಯರುಗಳಿಗೆ ವಿಶೇಷವಾದ ಗೌರವವಿದೆ. ಎಂದು ಕೊಂಡಾಡಿದರು.

ಮುಖ್ಯ ಅತಿಥಿಗಳಾದ ಮಾಜಿ ಸಚಿವರಾದ ಶ್ರೀ ಲಕ್ಷ್ಮೀನರಸಿಂಹಯ್ಯನವರ
ಮಾತನಾಡುತ್ತಾ ನಮ್ಮ ರಾಷ್ಟ್ರದಲ್ಲಿ ನಮ್ಮ S.I.T ಯಲ್ಲಿ ಉತ್ತೀರ್ಣರಾದ
ಎಂಜಿನೀಯರುಗಳಿಗೆ ಬಹಳ ಬೇಡಿಕೆಯಿದೆ. ಕಾರಣ ಇಲ್ಲಿನ ಉಪಾಧ್ಯಾಯ ವರ್ಗ
ಮತ್ತು ಆಡಳಿತ ವರ್ಗದವರ ಆದರ್ಶಪೂರ್ಣ ಮಾರ್ಗದರ್ಶನ ಕಾರಣ ಎಂದರು.

ಪೂಜ್ಯ ಶ್ರೀ ಶ್ರೀ **ಶಿವಕುಮಾರ ಮಹಾ ಸ್ವಾಮಿಗಳವರು** ಅಧ್ಯಕ್ಷ ಭಾಷಣ
ಮಾಡುತ್ತಾ ಇಂದಿನ ವೈಜ್ಞಾನಿಕ ಯುಗದಲ್ಲಿ ತಾಂತ್ರಿಕತಜ್ಞರ ಪಾತ್ರ ಬಹಳವಾಗಿದೆ.
ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ ದಕ್ಷರೂ ಪ್ರಾಮಾಣಿಕರಾದ ಎಂಜಿನೀಯರುಗಳ
ಸೇವೆ ಅತ್ಯಂತ ಮಹತ್ವಪೂರ್ಣವಾದುದು. ನಮ್ಮ ನಾಡಿನ ಪ್ರಾಕೃತಿಕ ಸಂಪತ್ತನ್ನು
ರಚನಾತ್ಮಕವಾಗಿ ಬಳಸಿಕೊಂಡು ರಾಷ್ಟ್ರಕಟ್ಟುವ ಪಣವನ್ನು ತೊಡಬೇಕು ನಮ್ಮ
ಈ ಯುವ ಪೀಳಿಗೆ ಎಂದು ಉಪದೇಶ ನೀಡಿದರು.

ದಿನಾಂಕ 2-10-88 ರಂದು ಬೆಳಿಗ್ಗೆ 9 ಘಂಟೆಗೆ ಶ್ರೀ ಕ್ಷೇತ್ರದ ಪ್ರಫುಲ್ಲ
ಭವನದಲ್ಲಿ ರಾಷ್ಟ್ರಪಿತ ಮಹಾತ್ಮ ಗಾಂಧಿಜಯಂತಿ ಸಮಾರಂಭ ಜರುಗಿತು.
ಸಮಾರಂಭದ ಅಧ್ಯಕ್ಷತೆಯನ್ನು ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ
ವರು ವಹಿಸಿದ್ದರು. ಪೂಜ್ಯರು ಸಭೆಯನ್ನು ಆಶೀರ್ವದಿಸುತ್ತಾ " ಮಹಾತ್ಮರ ಸ್ಮರಣೆ
ಎಂದಿಗಿಂತ ಇಂದು ಪ್ರಸ್ತುತವಾಗಿದೆ. ಜಯಂತಿ ಆಚರಣೆ ಕೇವಲ ಸಂಪ್ರದಾಯ
ವಾಗಿ ಉಳಿಯದೆ. ಅದು ಅರ್ಥವತ್ತಾದಾಗ ಬಾಪೂಜಿಯವರ ಆತ್ಮಕ್ಕೆ ಶಾಂತಿ.
ನಾಥೂರಾವ್ ಗೂಡ್ಸೆ ಗಾಂಧಿಯವರ ಭೌತಿಕ ಶರೀರ ಕೊಂಡ ಆದರೆ ನಾವಿಂದು
ಗಾಂಧಿಯವರ ಆತ್ಮಘಾತುಕರಾಗಿದ್ದೇವೆ. ಅವರ ತತ್ವಾಚರಣೆ ಜಯಂತಿಯ ಸಂಕೇತ
ವಾಗಬೇಕು " ಎಂದು ಆಶೀರ್ವದಿಸಿದರು.

ಅಧ್ಯಕ್ಷತೆವಹಿಸಿದ್ದ ಸಂಮಾನ್ಯ ಲಕ್ಷ್ಮೀ ನರಸಿಂಹಯ್ಯನವರು ಮಾತನಾಡುತ್ತಾ ಗಾಂಧೀಜಿಯವರು "ನಮಗೆ ರಾಜಕೀಯ ಸ್ವಾತಂತ್ರ್ಯ ತಂದು ಕೊಟ್ಟರು. ಅದನ್ನು ಉಳಿಸಿ ಬೆಳೆಸಿ ಕೊಳ್ಳುವ ಜವಾಬ್ದಾರಿ ನಮ್ಮೆಲ್ಲರ ಮೇಲಿದೆ" ಎಂದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ತುಮಕೂರಿನ ಪ್ರಸಿದ್ಧ ವಕೀಲರಾದ ಶ್ರೀ ಹೆಚ್ ಎಸ್. ವೆಂಕಟರಾಮಯ್ಯನವರು ಮಾತನಾಡುತ್ತಾ ಗಾಂಧೀಜಿಯವರು "ಆತ್ಮಾಭಿಮಾನಿಗಳು, ಮಹಾಮಾನವತಾವಾದಿ, ರಾಷ್ಟ್ರಾಭಿಮಾನವುಳ್ಳ ಕಟ್ಟಾ ಭಾರತೀಯರು. ಆದರೆ ನಾವುಗಳು ಕೇವಲ ಘೋಷಣೆ ಆರ್ಭಟಗಳಿಂದ ಗಾಂಧಿಯನ್ನು ಉಳಿಸಿ ಕೊಂಡಿದ್ದೇವೆ. ಬದುಕಿನಲ್ಲಿ ಉಳಿಸಿ ಕೊಂಡಿಲ್ಲ. ಅಭಿಮಾನ ಶೂನ್ಯರಾಗಿ ಬದುಕುವ ನಮಗೆ ಗಾಂಧಿಯವರ ಹೆಸರು ಹೇಳುವ ಹಕ್ಕನ್ನು ಕಳೆದು ಕೊಂಡಿದ್ದೇವೆ. ನಮ್ಮತನವನ್ನು ಕಳೆದು ಕೊಂಡಿದ್ದೇವೆ" ಎಂದರು.

# ಶೈವಧರ್ಮದ ಹಿನ್ನಲೆ

–ವಿದ್ಯಾಲಂಕಾರ ಪ್ರೊ॥ ಎಸ್.ಕೆ. ರಾಮಚಂದ್ರರಾವ್

ನಮ್ಮ ನಾಡಿನಲ್ಲಿ ಶೈವಧರ್ಮ ಎಷ್ಟು ಹಳೆಯದು ? ನಾಡಿನ ಇತಿಹಾಸ ಎಷ್ಟು ಹಿಂದಕ್ಕೆ ಸರಿಯಬಲ್ಲದೋ ಅಷ್ಟು ಹಿಂದಕ್ಕೆ ಈ ಧರ್ಮ ಸಾಗುವುದೆಂದು ಇತಿ. ಹಾಸ ಬಲ್ಲರು ಹೇಳುತ್ತಾರೆ, ನಾಡಿನ ಇತಿಹಾಸದ ಅರುಣೋದಯವನ್ನು ಐದಾರು ಸಾವಿರ ವರ್ಷಗಳಷ್ಟು ಹಿಂದೆ ಸೈಂಧವ ಸಂಸ್ಕೃತಿಯಲ್ಲಿ ಗುರುತಿಸುವುದು ವಾಡಿಕೆಯಷ್ಟೆ ಆ ಸಂಸ್ಕೃತಿಯ ಉಳಿಕೆಗಳಲ್ಲೇ ಈ ಧರ್ಮದ ಕುರುಹಗಳನ್ನು ಕಾಣಬಹುದೆನ್ನು ತ್ತಾರೆ ತಜ್ಞರು. ಅಲ್ಲಿಂದ ಮುಂದೆ ಋಗ್ವೇದದಲ್ಲಿ, ಬ್ರಾಹ್ಮಣಗಳಲ್ಲಿ, ಶ್ವೇತಾಶ್ವತರ ಉಪನಿಷತ್ತಿನಲ್ಲಿ, ಮಹಾಭಾರತದಲ್ಲಿ, ಪುರಾಣಗಳಲ್ಲಿ, ಆಗಮಗಳಲ್ಲಿ ಇದು ಬೆಳೆದುಬಂದ ದಾರಿಯನ್ನು ಗುರುತಿಸುತ್ತಾರೆ. ನಡು ಯುಗದಲ್ಲಿ ನಡೆದ ಧರ್ಮಕಾಂತ್ರಿಯನ್ನೂ ಪ್ರಸ್ತಾಪಿಸಿ ಕಾಶ್ಮೀರ, ತಮಿಳುನಾಡು, ಆಂಧ್ರಪ್ರದೇಶ, ಕರ್ಣಾಟಕಗಳಲ್ಲಿ ಶೈವಧರ್ಮ ಹರಡಿದುದನ್ನೂ ಹೇಳುತ್ತಾರೆ.

ಹೀಗೆ ಶೈವಧರ್ಮದ ಉಗಮವನ್ನೂ ವಿಕಾಸವನ್ನೂ ವಿವರಿಸುವವಾಗ, ಒಂದು ವಿವರವನ್ನು ಮರೆಯಬಾರದು. ಊರಿಗೊಂದು ಹೆಸರು, ವ್ಯಕ್ತಿಗೊಂದು ಹೆಸರು, ಬಳಸುವ ಪದಾರ್ಥಕ್ಕೊಂದು ಹೆಸರು, ಸರಿಯೇ. ವ್ಯವಹಾರಕ್ಕೆ ಹೆಸರು ನೆರವಾಗುತ್ತದೆ; ಒಂದನ್ನು ಇನ್ನೊಂದರಿಂದ ರೂಪ. ರಾಶಿ, ಗುಣಗಳಲ್ಲಿ ಬೇರ್ಪಡಿಸಲ ಅನುಕೂಲವಾಗುತ್ತದೆ ; ಹಲವಾರು ಬೇರೆ ಬೇರೆ ವಿವರಗಳನ್ನು ಒಂದು ನೆಲೆಯಲ್ಲಿ ಸೇರಿಸಲು ಸಾಧ್ಯವಾಗುತ್ತದೆ ಆದರೆ ಧರ್ಮವೆನ್ನುವುದು ಪದಾರ್ಥವಲ್ಲ, ಪ್ರಾಣಿ ಯಲ್ಲ, ಅದಕ್ಕೊಂದು ನಿರ್ದಿಷ್ಟವಾದ ಭೌತಿಕವಾದ ಸ್ವರೂಪವಿರದು. ಧರ್ಮವೆನು ವುದು ಭಾವನೆಗಳ ಸಮುದಾಯ. ಕಲ್ಪನೆಗಳ ಕಟ್ಟು, ಆಚಾರಗಳ ಹಂದರ. ಇದೇನು ಉಂಡೆಯಾಗಿ, ಎಲ್ಲ ಕಾಲಕ್ಕೂ ಒಂದೆ ಬಗೆಯಾಗಿ ಉಳಿಯುವುದಿಲ್ಲ ಇಂಥ ಧರ್ಮಕ್ಕೆ ಹೆಸರೊಂದನ್ನು ಇರಿಸುವುದೇನೋ ವ್ಯವಹಾರದ ದೃಷ್ಟಿಯಿಂದ ಅಗತ್ಯವೆ, ಅನಿವಾರ್ಯವೇ ಆದರೆ ಕರೆಯುವ ಹೆಸರಿಗೂ ಕ ರೆ ಯಿ ಸಿ ಕೊ ಳ್ಳು ವ ವಿವರಕ್ಕೂ ನಿಯತವಾದ ನಂಟೇನು ಇಲ್ಲದಿರುವುದು ಇಲ್ಲಿ ಎದ್ದು ಕಾಣುತ್ತದೆ. ಧರ್ಮದ ಆಳ, ಎತ್ತರ, ಅಗಲಗಳನ್ನೆಲ್ಲ ಹೆಸರು ಒಳಗೊಳ್ಳಲಾರದು. ಹೆಸರನ್ನು ಹಿಡಿದು ಧರ್ಮದ ಜಾಡನ್ನು ಅರಿತುಕೊಳ್ಳುವುದಾಗದು. ಧರ್ಮದ ನೆಲೆಯೂ ಮುಖ ಗಳೂ ಮಾರ್ಪಾಟುಗಲೂ ಹೆಸರು ಹಾಗೆಯೇ ಉಳಿದುಕೊಳ್ಳುವುದು ಗೊಂದಲಕ್ಕೆ ಎಡೆಮಾಡಿಕೊಡುತ್ತದೆ.

ಶೈವಧರ್ಮವೆನ್ನುವುದು ಹೆಸರು. ಈ ಮಾತಿನ ಮೂಲಾರ್ಥ 'ಶಿವನನ್ನು ಕುರಿತದ್ದು' 'ಶಿವನಿಗೆ ಸಂಬಂಧಿಸಿದುದು' (ಶಿವ + ಅಣ್, ಶಿವಸ್ಯೇದಂ) ಶಿವನೆಂಬ ದೇವತೆಯ ಪಾರಮ್ಯವನ್ನು ಒಪ್ಪಿಕೊಂಡು, ಶಿವನನ್ನು ಒಲಿಸಿಕೊಳ್ಳುವ ಹಂಬಲವಿದ್ದು, ಶಿವಗತಿಯೇ ಬದುಕಿನ ಲಕ್ಷ್ಯವೆಂದು ನಂಬಿಕೊಂಡವರು ಶೈವರು. ಆದರೇ ಎಲ್ಲ ಕಾಲಕ್ಕೂ ಇವರಿಗೆ ಶೈವರೆಂಬ ಹೆಸರೇ ಇದ್ದಿತೆನ್ನಲಾಗದು. ಋಗ್ವೇದದದಲ್ಲಿ ಸುದಾಸರೊಂದಿಗೆ ಭರತರೊಂದಿಗೆ ಹಗೆತನ ಮಾಡಿದ 'ಶಿವಾಸ' ರಿದ್ದರು; 'ವಿಷಾಣಿ' ಗಳಾದ ಇವರು ಶೈವರೇ. ಪತಂಜಲಿಯ ಕಾಲಕ್ಕೆ ಇವರು 'ಶಿವಭಾಗವತ' ರೆನಿಸಿಕೊಂಡರು. ಸಿದ್ಧಾಂತ ಶಿಖಾಮಣಿಯು 'ಶಿವಾಶ್ರಿತ' ರೆಂದು ಇವರನ್ನು ಕರೆದಿದೆ. ಕ್ರಿಸ್ತಪೂರ್ವ ಒಂದೆರಡು ಶತಮಾನಗಳಲ್ಲಿ 'ಶಿವರಕ್ಷಿತ' ರಿದ್ದ ಉಲ್ಲೇಖ ತಕ್ಷಶಿಲೆಯ ಖರೋಷ್ಠಿ–ಬ್ರಾಹ್ಮೀ, ಶಾಸನದಿಂದ ತಿಳಿದುಬರುತ್ತದೆ. ಕ್ರಿಸ್ತಾಬ್ದ ಮೊದಲಾಗುವಾಗ 'ಅತ್ಯಂತ ಮಹೇಶ್ವರ' ರಿದ್ದರು (ಅತ್ಯಂತಸ್ವಾಮಿಮಹಾಭೈರವ ಭಕ್ತರು, ); ವಾತಾಟಕರ ಶಾಸನಗಳು ಇವರನ್ನು ಪ್ರಸ್ತಾಪಿಸುತ್ತವೆ. ಮುಂದೆ ಮೌಖರಿಅರಸರ ಕಾಲದಲ್ಲಿ 'ಪರಮುಮಹೇಶ್ವರ' ರಿದ್ದರು.

"ಪಶುಪತಿಭಕ್ತ" ರಿದ್ದರು. ಗುಪ್ತರ ಕಾಲದಿಂದ ಮುಂದೆ ಈ ಧರ್ಮದಲ್ಲಿ ಹಲವಾರು ಕವಲುಗಳೊಡೆದವು. ನಾರದೀಯ ಪುರಾಣವು ಪಾಶುಪತ, ಮಹಾವ್ರತಧರ, ಸಿದ್ಧಾಂತ ಮಾರ್ಗಿ, ಕಾಪಾಲಿಕರೆಂಬ ಶಾಖೆಗಳನ್ನು ಉಲ್ಲೇಖಿಸುತ್ತದೆ. ವಾಮನ ಪುರಾಣವು ಆದಿಶೈವ, ಪಾಶುಪತ, ಕಾಲವದನ, ಕಪಾಲಿ ಎಂಬ ನಾಲ್ಕು ಶೈವವಿಭಾಗಗಳನ್ನು ಪಟ್ಟಿಮಾಡಿದೆ. ಬಾದರಾಯಣ ಸೂತ್ರಗಳಿಗೆ ಶಂಕರಾಚಾರ್ಯ ಸಿದ್ಧಪಡಿಸಿದ ಭಾಷ್ಯಕ್ಕೆ ವ್ಯಾಖ್ಯಾನವನ್ನು ಬರೆದ ವಾಚಸ್ಪತಿ-ಮಿಶ್ರನು ಮಾಹೇಶ್ವರರಲ್ಲಿ ಶೈವ ಪಾಶುಪತ, ಕಾರುಣಿಕ-ಸಿದ್ಧಾಂತಿ, ಕಾಪಾಲಿಕ ಎನ್ನುವ ನಾಲ್ಕು ಪಂಗಡಗಳಿದ್ದುವೆಂದು ತಿಳಿಸಿದ್ದಾನೆ. ರಾಮಾನುಜಾಚಾರ್ಯರು ಶ್ರೀ ಭಾಷ್ಯದಲ್ಲಿ ಕಪಾಲಿ, ಕಾಲಾಮುಖ, ಪಾಶುಪತ, ಶೈವಗಳೆಂಬ ಪ್ರಭೇದವನ್ನು ಸೂಚಿಸಿದ್ದಾರೆ.

ಶೈವಧರ್ಮದ ಇತಿಹಾಸದಲ್ಲಿ ಈ ಶಾಖೆಗಳನ್ನೆಲ್ಲ ಪರಿಶೀಲಿಸಬೇಕಾಗುತ್ತದೆ; ಪಾಶುಪತಧರ್ಮದ ದರ್ಶನಭಾಗವನ್ನು ಪರೀಕ್ಷೆ ಮಾಡಬೇಕಾಗುತ್ತದೆ. ಸಿದ್ಧಾಂತ ಮಾರ್ಗವು ಕಾಶ್ಮೀರದಲ್ಲಿ, ಕರ್ನಾಟಕದಲ್ಲಿ, ತಮಿಳುನಾಡಿನಲ್ಲಿ, ಆಂಧ್ರಪ್ರದೇಶದಲ್ಲಿ ಬೆಳೆದು ಬಂದ ಬಗೆಯನ್ನು ವಿಶ್ಲೇಷಣೆ ಮಾಡಬೇಕಾಗುತ್ತದೆ. ನಡುಯುಗದಲ್ಲಿ ನಡೆದ ಆಂದೋಳನದಿಂದ ಹಳೆಯ ಶೈವಧರ್ಮ ಹೊಸದಾಗಿ ಮುಖ್ಯುರಿಗೊಂಡದ್ದನ್ನು ವಿವರಿಸಬೇಕಾಗುತ್ತದೆ. ಐದಾರು ಸಾವಿರ ವರ್ಷಗಳು ಹೀಗೆ ಉಳಿದು, ಬೆಳೆದು, ಹರಡಿಕೊಂಡು ಬಂದ ಧರ್ಮವನ್ನು ಸ್ಥೂಲವಾಗಿ ಶೈವವೆಂದು ಗುರುತಿಸಿ, ಅದರ ಧೋರಣೆಯನ್ನು ಅರಿತುಕೊಳ್ಳುವ ಪ್ರಯತ್ನಗಳು ನಡೆದಿವೆ. ಆದರೆ ಶೈವವೆಂದು

ಸ್ಥೂಲವಾಗಿ ನಿರ್ದೇಶಗೊಂಡಿರುವ ಧರ್ಮದ ಬುನಾದಿ ಯಾವುದು, ಅದರ ಮೊದಲು ಚೌಕಟ್ಟು ಏನಿದ್ದಿತು. ಎನ್ನುವುದರ ಕಡೆ ಅಷ್ಟಾಗಿ ಗಮನ ಹರಿದಿಲ್ಲ.

ವಾಯುವೀಯ ಸಂಹಿತೆಯು (ಶಿವಪುರಾಣ) ಶಿವಜ್ಞಾನವನ್ನು ಎತ್ತಿ ಹಿಡಿದು ಸೂಚಿಸಿತಷ್ಟೇ. ಅದು—'**ಶಿವೇ ಭಕ್ತಿರ್ನ ಸಂದೇಹಸ್ತಯಾ ಯುಕ್ತೋ** ವಿಮುಚ್ಯತೇ' ಎಂದು ಹೇಳಿ ಪ್ರಸಾದೋ 'ಭಕ್ತಿ ಸಂಭವ:' ಎನ್ನುವ ಭಾಗವತ ತತ್ತ್ವವನ್ನು ನಿರೂಪಿಸಿತು. ಆಗಮಶೈವದ ಆಕರ ಇದೇ. ಋಗ್ವೇದದಲ್ಲಿ ಕಾಣಿಸಿಕೊಂಡ ರುದ್ರ ಯಜುರ್ವೇದದ ತೈತ್ತಿರೀಯ ಸಂಹಿತೆಯಲ್ಲಿ (ಶತರುದ್ರೀಯ) 'ಶಿವತನು'ವೆಂದಾಗಿ, ಶತಪಥಬ್ರಾಹ್ಮಣದಲ್ಲಿಯೂ ಕೌಷೀತಕೀ ಬ್ರಾಹ್ಮಣದಲ್ಲಿಯೂ ಎಂಟು ಹೆಸರುಗಳನ್ನು ಪಡೆದು (ರುದ್ರ, ಶರ್ವ, ಉಗ್ರ ಅಶನಿ ಎಂಬ ರುದ್ರಪರವಾದ ಹೆಸರುಗಳು; ಭವ, ಪಶುಪತಿ, ಮಹಾದೇವ, ಈಶಾನ ಎಂಬ ಶಿವ ಪರವಾದ ಹೆಸರುಗಳು), ಅಥರ್ವವೇದದಲ್ಲಿಯೂ ಶ್ವೇತಾಶ್ವತರೋಪನಿಷತ್ತಿನಲ್ಲಿಯೂ 'ಏಕ ದೇವತೆ' ಯಾಗಿ ('ಏಕೋ ಹಿ ರುದ್ರೋ ನ ದ್ವಿತೀಯಾಯ') ನಿಂತವನನ್ನು ಭಕ್ತಿಯಿಂದ ಕಂಡು ಅವನ ಕರುಣೆಯನ್ನು ಪಡೆದುಕೊಳ್ಳುವುದೇ ಶೈವಧರ್ಮದ ಸಿದ್ಧಾಂತ ಮಾರ್ಗವಾಯಿತು. '**ದ್ವೇ ತನೂ ತಸ್ಯ ದೇವಸ್ಯ ಬ್ರಾಹ್ಮಣಾ ವೇದಜ್ಞಾ ವಿದು:— ಘೋರಂ ಅನ್ಯಾಂ'; 'ಶಿವಾಂ ಅನ್ಯಾಂತೇ ತನೂ ಬಹುಧಾ ಪುನ:**' ಹೀಗೆಲ್ಲ ರುದ್ರ-ಶಿವರಿಗೆ ಭೇದವನ್ನು ಮೊದಲಿನಿಂದ ಕಾಣಿಸುತ್ತ ಬಂದಿದ್ದಾರೆ. ರುದ್ರನಿಂದಲೇ ಸಾವು, ಆತಂಕ, ರೋಗ-ರುಜಿನಗಳು ಒವಗುವುವು. ರುದ್ರನೇ ಅವನ್ನು ಹೋಗಲಾಡಿಸುವವನು ಎನ್ನುವ ಒಕ್ಕಣೆ ಋಗ್ವೇದದಲ್ಲಿಯೇ ಕಾಣಬರುತ್ತದೆ. 'ಶಿವಾ ರುದ್ರಸ್ಯ ಭೇಷಜೀ' (ಪಾತಂಜಲ ಮಹಾಭಾಷ್ಯ) ಎನ್ನುವಾಗ ರುದ್ರನಿಂದ ಕೆಡಕು, ಶಿವನಿಂದ ಒಳಿತು ಎನ್ನುವ ಧ್ವನಿಯಿದೆ. ಇದನು ವಿದ್ವಾಂಸರು ಗಮನಿಸಿದ್ದರೂ ಇದರ ಮೂಲ ನೆಲೆಯನ್ನು ಕಂಡುಕೊಳ್ಳುವ ಗೋಜಿಗೆ ಹೋಗಿಲ್ಲ. ರುದ್ರ-ಶಿವ ಕಲ್ಪನೆಗಳು ಬೆರೆತುಕೊಂಡಾಗಲೇ ಶೈವಧರ್ಮ ಮೈದಳೆಯಿತೋ ಎನ್ನುವ ಸಮಸ್ಯೆಯನ್ನು ಪರಿಹರಿಸಲೆಣಿಸಿಲ್ಲ. ಉಗ್ರ ಸೌಮ್ಯ ಎರಡು ಕಳೆಗಳು ಕಲೆತಾಗ 'ವೀರಶೈವ'ವೆಂದಾಯಿತೋ ಎನ್ನುವ ವಿಚಾರವಾಗಿ ಗಮನ ಹರಿಸಿಲ್ಲ.

'**ದ್ವೇ ತನೂ ತಸ್ಯ ದೇವಸ್ಯ**' ಎನ್ನುವ ಕಲ್ಪನೆ ತುಂಬಾ ಪ್ರಾಚೀನವಾದುದು. ಈ ಮಾತು ಮೂಡುವುದಕ್ಕಿಂತಲೂ ಹಿಂದಿನ ಭಾವನೆ ಅದು. ಘೋರವಾದುದೊಂದು ಸೌಮ್ಯವಾದುದಿನ್ನೊಂದು, ಪತಂಜಲಿಯ ಕಾಲಕ್ಕೆ ಆಯ:ಶೂಲಿಕವಾದ ಶಿವ ಭಾಗವತರು 'ರಭಸ' ಕರ್ಮಗಳಿಂದ ಶಿವಗತಿಯನ್ನು ಪಡೆಯಲೆತ್ನಿಸುತ್ತಿದ್ದರೆಂದು ತಿಳಿದುಬರುತ್ತದೆ. ಋಗ್ವೇದದ '**ಕೇಶೀಸೂಕ್ತ**' (ಹತ್ತನೆಯ ಮಂಡಲದ ೧೩೬-ನೆಯ ಸೂಕ್ತ) ರುದ್ರನೊಂದಿಗೆ ವಿಷವನ್ನು ಕುಡಿಯುವ ವಾತರಶನರಾದ ಮುನಿಗಳು

ಉನ್ಮದಿತ'ರಾಗಿವುದನ್ನು ಸ್ವಾರಸ್ಯವಾಗಿ ಚಿತ್ರಿಸುತ್ತದೆ. ಕೈಯಲ್ಲಿ ಶೂಲವನ್ನೋ, ಕೊಡಲಿಯನ್ನೋ ಕಟ್ಟಿಗೆಯನ್ನೋ ಹಿಡಿದು ಎರಡು ಕೈಗಳ ವೀರ-ಶಿವನ ಚಿತ್ರಣ ಇಂಡೋ-ಪಾರ್ಥಿಯನ್ ದೊರೆಗೊಂಡೊ ಫೊರಿಸ್, ಕುಷಾಣ ರಾಜರಾದ ವೇಮ ಕಾಡ್ ಫಿಸಸ್, ಕನಿಷ್ಕ, ಹುವಿಷ್ಕ, ಇಮ್ಮಡಿ ವಾಸುದೇವ ಇವರ ನಾಣ್ಯಗಳ ಮೇಲೆ ಮತ್ತೆ ಮತ್ತೆ ಕಾಣಸಿಗುತ್ತದೆ. ಸಾಮಾನ್ಯರಾದ ಶಿವಭಕ್ತರಲ್ಲಿಯೂ ವೀರಾವೇಶದ ಸುಳಿವಿದ್ದುದು 'ವಿದ್ವನ್ಮೋದತರಂಗಿಣಿ' ಯಂಥ ಅರ್ವಾಚೀನ ಗ್ರಂಥಗಳಲ್ಲಿಯೂ ತಿಳಿದುಬರುತ್ತದೆ. ಬರುತ್ತಿರುವ ಶೈವವನ್ನು ನೋಡಿ (ಆಯಾಂತಂ ಶೈವಮಾಲೋಕ್ಯ)-

ಶ್ರೀಮಾನಸಾವೇತಿ ಜಟಾಲಮೌಲಿ ವಾಘ್ರತ್ವಗಾಲಂಬಿತ ಮಧ್ಯಭಾಗಃ ।
ವಿಭೂತಿಸಂಭೂಷಿತ ಭಾಸ್ವದಾಗೋ ರುದ್ರಾಕ್ಷಮಾಲಾಕಲಿತೋರ್ಧ್ವದೇಹಃ ॥

ಎನ್ನುವ ವರ್ಣನೆ ಈ ಗ್ರಂಥದ ಎರಡನೆಯ ತರಂಗದಲ್ಲಿ ಬರುತ್ತದೆ. ಘೋರಸ್ವಭಾವದ ರುದ್ರನಿಗೆ ಮನುಷ್ಯಾಕಾರದ ಮೂರ್ತಿ ಪ್ರತೀಕವನ್ನು ಮಾಡಿ ಆಯುಧಗಳಿಂದಲೋ ಜೊತೆಗಿರುವ ಬಸವನಿಂದಲೋ ಅದರ ಸ್ವರೂಪವನ್ನು ನಿರ್ದೇಶಿಸುವ ವಾಡಿಕೆ ಕ್ರಿಸ್ತ ಯುಗದ ಮುಂಚೆಯೇ ಕಾಣಿಸಿಕೊಳ್ಳುತ್ತದೆ. ಗುಡಿಮಲ್ಲದ ಸುಪ್ರಸಿದ್ಧ ಶಿವವಿಗ್ರಹ ವನ್ನು ಈ ಸಂದರ್ಭದಲ್ಲಿ ಗಮನಿಸ ಬೇಕು. ಅಪಸ್ಮಾರಪುರುಷನನ್ನು ಮೆಟ್ಟಿನಿಂತಿ ರುವ ಶಿವ ಒಂದು ಕೈ ಯಲ್ಲಿ ಕೊಡಲಿಯನ್ನೂ ಇನ್ನೊಂದರಲ್ಲಿ ಮೃಗವೊಂದನ್ನೂ ಹಿಡಿದು' ವೀರನಂತೆಯೇ ನಿಂತಿರುವ ಶಿಲ್ಪ ಇದು. ಶಿವನ ಇನ್ನೊಂದು ಮುಖ ಸೌಮ್ಯವಷ್ಟೆ; ಇದೇ ಲಿಂಪ ಗಿ ಮೂಡಿಕೊಂಡು ಪೂಜೆಗೆ ಅನುವಾಯಿತು. ಸೌರ ಸಂಹಿತೆಯ ಶಿವರಹಸ್ಯವು ಲಿಂಗವು ಸೃಜನಾತ್ಮಕ ಶಕ್ತಿಯೆಂದು ವಿವರಿಸಿದೆ ಅವ್ಯ ಕ್ತನಾದ ಜಗದ್ವ್ಯಾಪಿಯಾದ ಶಕ್ತಿಯನ್ನು ಲಿಂಗವು ಪ್ರತಿನಿಧಿಸುತ್ತದೆ. ಲಿಂಗಪು ರಾಣವು 'ಲಿಂಗಮೂರ್ತಿಃಶಿವೋಜ್ಯೋತಿಃ, ಎಂದು ಸ್ಪಷ್ಟವಾಗಿಯೇ ಹೇಳುತ್ತದೆ (೨. ೬೬. ೭) ಸಕಲ ಅಥವಾ ವ್ಯಕ್ತವಾದುದು ರೌದ್ರವೆಂದು ನಿಷ್ಕಲ ಅಥವಾ ಅವ್ಯಕ್ತವಾದುದು ಸದಾ ಶಿವವೆಂದು ಲಿಂಗಪ್ರತಿಮಾಲಕ್ಷಣ ಸೂಚಿಸುತ್ತದೆ. ಲಿಂಗ ಪೂಜೆಗೂ ಮೆಸಪೊಟೇಮಿಯ, ಈಜಿಪ್ಟ್, ಗ್ರೀಸ್, ರೋಮ್ ಮೊದಲಾದೆಡೆ ಬಳಕೆಯಲ್ಲಿದ್ದ ಲೈಂಗಿಕ-ಕಾಮುಕ ಪ್ರವೃತ್ತಿಗಳ ಪೂಜೆಗೂ ಏನೇನೂ ಸಂಬಂಧ ವಿರದು. ಈ ವಿಚಾರವಾಗಿ ಸಾಕಷ್ಟು ವಾದ-ವಿವಾದಗಳು ಈಗಾಗಲೇ ನಡೆದಿವೆ. ಲಿಂಗಪೂಜೆಯು ಶಿಶ್ನತೃಪ್ತಿಯಲ್ಲವೆಂದು ದೃಢವಾಗಿದೆ. ಇದನ್ನು ಮತ್ತೆ ಇಲ್ಲಿ ಪ್ರಸ್ತಾ ಪಿಸುವ ಆಗತ್ಯವಿಲ್ಲ. ಶಿವನ ಸೌಮ್ಯ ಮುಖ ಲಿಂಗ ಎಂದಷ್ಟು ಹೇಳಿದರೆ ಸಾಕು.

( ಮುಂದುವರೆಯುತ್ತದೆ )

ಕವಿಕಾಣಿಕೆ

# ಸಿದ್ಧಗಂಗೆಯ ಮಠ

ಮಣ್ಣಿನಮಠ ! ಕಲ್ಲಿನಮಠ! ಗಚ್ಚಿನಮಠ ! ಗಾರೆಯಮಠ ! ಗಿರಿಯ ಮಠ ! ಹಿರಿಯಮಠ ! ದಶಮಠ ! ಶತಮಠ ! ಸಹಸ್ರಮಠ ! ಲಕ್ಷಮಠ ! ಇಂತಪ್ಪ ಬಿರುದಿನ ಮಠಂಗಳು ಬಹುಬಹಳ ದಾಸೋಹಂ ಬಿರುದಿನ ಮಠಂಗಳು ಅತಿವಿರಳ ! ಬಸವಲಿಂಗಪ್ರಿಯ ಕಟ್ಟೆಯ ಬಸವೇಶ್ವರನಲ್ಲಿ ದಾಸೋಹಂ ಬಿರುದಿನ ಮಠವು ಸಿದ್ಧಗಂಗೆಯ ಮಠವು !

ಶ್ರೀಸಿದ್ಧಗಂಗೆಯು ಸಿದ್ಧ ಪುರುಷರ ಬೀಡಾಗಿಹುದು ! ಶುದ್ಧ ಪುರುಷರ ನಾಡಾಗಿಹುದು! ಪ್ರಸಿದ್ಧ ಪುರುಷರ ನಾಡಾಗಿಹುದು ! ಧರ್ಮದ ರಂಗದೊಳು, ಸಂಸ್ಕೃತಿಯ ರಂಗದೊಳು, ದಾಸೋಹದ ರಂಗದೊಳು ಉತ್ತುಂಗಶಿಖರವ ಮುಟ್ಟಿ, ಮೆಟ್ಟಿ,ಘಟ್ಟಿಗೊಂಡಿಹುದು! ಗೋಸಲಯತಿವರನು ಗಂಗೆಯ ನಿರ್ಮಿಸಿ, ಮಠವ ಸ್ಥಾಪಿಸಿದ ಹಠದ ಭೂಮಿ ಇದು! ತೋಂಟದ ಯತಿವರನು ವಚನಂಗಳ ರಚಿಸಿ, ಜ್ಞಾನವ ಬಿತ್ತರಿಸಿದ ಪಾವನ ಭೂಮಿ ಇದು ! ಅಟವೀಶ ಯತಿವರನು ಕೈಕೊಂಡು, ದಾಸೋಹವ ಅನುಷ್ಠಾನವ ನಡೆಸಿದ ನಿಷ್ಠೆಯ ಭೂಮಿ ಇದು ! ಉದ್ದಾನ ಯತಿವರನು ಮಕ್ಕಳಿಗೆ ವಿದ್ಯೆಯ ಕಲಿಸಿದ ವಿಶಿಷ್ಟ ಭೂಮಿ ಇದು! ಇಂತೀ ಯತಿವರರೆಲ್ಲರ ವಿವಿಧ ಕಾರ್ಯಂಗಳ ಒಂದುಗೂಡಿಸಿ ಲೋಕ ಅಚ್ಚರಿಗೊಂಬಂತೆ ಶಿವಕುಮಾರ ಯತಿವರನು ಇಂದು ಸಮಗ್ರ ಸೇವೆಯ ಸಲ್ಲಿಸುತ್ತಾ, ಜಗದ ನಿಜಗುರುವಾಗಿ ಶೋಭಿಪ ಶುಭ್ರಭೂಮಿ ಇದು ! ಇಂತಪ್ಪ ಮಹಾ ಪುಣ್ಯ ಕ್ಷೇತ್ರಕ್ಕೆ, ಇಂತಪ್ಪ ಮಹಾಗುರುಪರಂಪರೆಗೆ ನಾವು ಅಹರ್ನಿಶಿ ನಮೋ ನಮೋ ನಮೋ ಎನುತಿಹೆವು ಬಸವಲಿಂಗಪ್ರಿಯ ಕಟ್ಟೆಯ ಬಸವೇಶ್ವರನಲ್ಲಿ !

—ಹೀರಿಗೆಕಟ್ಟೆ ಬಸವಪ್ಪ

# ಮಹಾದೇವಿಯಕ್ಕನ ಮಹತಿ

ಡಾ|| ಪಿ. ಚಂದ್ರಶೇಖರಾರಾಧ್ಯ
ಕನ್ನಡ ರೀಡರ್, ಕ.ವಿ.ವಿ. ಧಾರವಾಡ ಶಿಕ್ಷಣ ಕಾಲೇಜು,

ಶರಣ-ಶರಣೆಯರ ಜೀವನಗಳು ಸಮಾಜ ಸುಧಾರಣೆಯಲ್ಲಿ ಅಮೋಘ ಪಾತ್ರ ವಹಿಸಿವೆ. ಅವರ ವಚನಗಳು ಸಮಾಜಕ್ಕೆ ಮಾರ್ಗದರ್ಶನವನ್ನು ಕೊಡುವುದಲ್ಲದೆ ಸಾಹಿತ್ಯಕ್ಕೆ ಅಮೂಲ್ಯ ಕಾಣಿಕೆಗಳಾಗಿವೆ. ಶರಣ ಜೀವನದಲ್ಲಿ ಶ್ರೇಷ್ಠರಾದ ಅಣ್ಣ ಬಸವಣ್ಣ, ಅಕ್ಕಮಹಾದೇವಿ, ಅಲ್ಲಮಪ್ರಭು ಇವರುಗಳು ಇಂದಿಗೂ ತಮ್ಮ ಶುದ್ಧ ಜೀವನದಿಂದ, ಸುಧಾರಣೆಯ ಕಾರ್ಯಗಳಿಂದ, ಮಾರ್ಗದರ್ಶನದ ವಚನಗಳಿಂದ ಅಣ್ಣ, ಅಕ್ಕ ಮತ್ತು ಪ್ರಭುಗಳಾಗಿದ್ದಾರೆ.

ಅಕ್ಕಮಹಾದೇವಿ ಸಮಾಜಸುಧಾರಣೆಗಳಿಂದಾಗಲೀ, ಲೋಕದ ಡೊಂಕು ತಿದ್ದಲೆಂದಾಗಲೀ ಪ್ರಯತ್ನಿಸಲಿಲ್ಲ. ಆಕೆಯ ವಚನಗಳು ಹೆಚ್ಚಾಗಿ ಮೊರೆ, ಭಕ್ತಿ, ನಿಷ್ಠೆ, ಪರಮಾತ್ಮ, ಆತ್ಮ ಇಂತಹವುಗಳ ಬಗ್ಗೆ ರಚಿಸಲಾಗಿದೆ. ತನ್ನ ನೋವು ನಲಿವುಗಳನ್ನು ವಚಿಸಿದ್ದಾಳೆ. ಅಕ್ಕಮಹಾದೇವಿ ಒಂದು ಧರ್ಮದ ಅಥವಾ ಒಂದು ಮತದ ವ್ಯಕ್ತಿಯಲ್ಲ. " ಎಲ್ಲಾ ಕಾಲದ, ಎಲ್ಲಾ ಧರ್ಮದ, ಎಲ್ಲಾ ದೇಶದ ಜನರೂ ಅನುಸರಿಸಬಹುದಾದ ಅನೇಕ ಸದ್ಗುಣಗಳ ಖಣಿ. ಅದಕ್ಕಾಗಿಯೇ ಆಕೆ ಎಲ್ಲರಿಗೂ ಎಲ್ಲ ಕಾಲಕ್ಕೂ ಅಕ್ಕ. ಆಕೆಯ ವಿಷಯುಗಳನ್ನು ಆಕೆಯ ಬಗ್ಗೆ ದೊರೆತಿರುವ ವಚನಗಳನ್ನೂ ಬರಹಗಳನ್ನೊ ಅವಲಂಬಿಸಿ ತಿಳಿದುಕೊಳ್ಳಬಹುದಾಗಿದೆ. ಅವುಗಳ ಆಧಾರದ ಮೇಲೆ ಜನರು ಆಕೆಯ ಜೀವನವನ್ನು ತಮ್ಮ ಬುದ್ಧಿಗೆ ಹಾಗೂ ಅನುಭವಕ್ಕೆ ಸಿಲುಕಿದ ರೀತಿಯಲ್ಲಿ ಚಿತ್ರಿಸಿದ್ದಾರೆ. ದೊರೆತ ಆಧಾರಗಳು ಎಷ್ಟರಮಟ್ಟಿಗೆ ಸತ್ಯವೋ ಎಷ್ಟರ ಮಟ್ಟಿಗೆ ಮಿಥ್ಯವೋ ಯಾರಿಂದಲೂ ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಈಗಿಂದೀಗ ನಡೆದ ಘಟನೆಗಳೇ ಒಬ್ಬರ ಬಾಯಿಂದ ಒಬ್ಬರಿಗೆ ಹೋಗುವುದರೊಳಗೆ ಕಾಗೆಯಂತೆ ಕಪ್ಪಾಗಿ ವದಂತಿ ಮಾಡಿದನೆಂಬ ಸುದ್ದಿ ಮೂರು ಕಾಗೆಗಳನ್ನೇ ವಾಂತಿ ಮಾಡಿದನಂತೆ. ಎಂದು ಹರಡುವಾಗ, ಎಂಟುನೂರು ವರ್ಷಗಳ ಹಿಂದಿನ ಸುದ್ದಿಯ ಬಗ್ಗೆ ಎಷ್ಟು ಸತ್ಯವಾದ ವಿಷಯಗಳು ಬರಬಹುದೋ ಎಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ವಚನಗಳನ್ನು ಬಿಟ್ಟರೆ ಅಕ್ಕನ ಕಾಲಕ್ಕೆ ಅತೀ ಸಮೀಪದಲ್ಲಿ ಸಿಕ್ಕುವ ಆಧಾರ ನ್ಯಾಯ ನಿಷ್ಠುರನಾದ ಹರಿಹರನು ಬರೆದ ರಗಳೆ. ಇದು ಸುಮಾರು ಎಂಭತ್ತು ವರ್ಷಗಳ ನಂತರ ಬರೆದುದ್ದು. ಹರಿಹರನು ಇದ್ದದನ್ನು ಇದ್ದದಂತೆಯೇ ಚಿತ್ರಿಸುವ ಕವಿ ಎಂದುಕೊಂಡರೂ ಕವಿ ಕವಿಯೇ. 'ರವಿ ಕಾಣದುದ ಕವಿ ಕಂಡ' ಎಂದು ಸಾಹಿತ್ಯದ ಚೌಕಟ್ಟನಲ್ಲಿ ವಿಷಯ ಜೋಡಣೆ ಮಾಡುವಾಗ, ಓದುಗರ ಮೆಚ್ಚುಗೆ, ಜನಪ್ರಿಯತೆ ಗಳಿಸಲು ರೂಪಾಂತರ ಆಗಿಯೇ ತೀರುತ್ತದೆ. ಮೇಲಾಗಿ ಕವಿಯೂ ಮನುಷ್ಯನಿಗೆ

ತಾನು ರಚಿಸುವ ಸಾಹಿತ್ಯದಲ್ಲಿ ತನ್ನ ಸ್ವಂತ ಅಭಿಪ್ರಾಯ. ವಿಚಾರಗಳನ್ನು ಬರಹದ ಮೂಲಕ ತಿಳಿಯಪಡಿಸುವುದು ಸಹಜವೇ. ಆದುದರಿಂದ ಕವಿಗಳ ಬರಹದಿಂದಾಗಲೀ, ಪುರಾಣಗಳಾಗಲೀ ಎಷ್ಟರಮಟ್ಟಿಗೆ ಸತ್ಯಕ್ಕೆ ಹತ್ತಿರವಾಗಿದೆ ಎಂಬುದನ್ನು ನಿಖರವಾಗಿ ಹೇಳಲು ಅಸಾಧ್ಯ. ಒಟ್ಟಿನಲ್ಲಿ ಈಕೆ ಒಬ್ಬ ಮಹಾ ಶಿವಶರಣೆ, ನಶ್ವರನಲ್ಲದ ಈಶ್ವರನ ನಿಸ್ಸೀಮ ಭಕ್ತಿ ಅವನ ಪದತಲದಲ್ಲಿ ತನ್ನನ್ನೇ ತಾನರ್ಪಿಸಿಕೊಂಡ ವೈರಾಗ್ಯ ನಿಧಿ. ಪ್ರಪಂಚದಲ್ಲಿ ಲಾ ಪ್ರಲೋಭನೆಗಳೆಲ್ಲಾ ಕೈಚಾಚಿ ಕರೆದರೂ ಮೈ ಒಡ್ಡದ ಮಹಾಧೀರೆ ಯೌವನ, ಐಶ್ವರ್ಯ, ಸ್ಥಾನ, ಗೌರವಾದಿಗಳು ಪದತದಲದಲ್ಲಿ ಬಿದ್ದರೂ ತಾರುಣ್ಯ ದಲ್ಲಿಯೇ ಅವುಗಳ ನಶ್ವರತೆಯನ್ನರಿತು ನಡೆದ ವೈರಾಗ್ಯ ನಿಧಿ, ಯಾವ ವಯಸ್ಸಿನಲ್ಲಿ ಉಳಿದವರಾರೇ ಆಗಿದ್ದರೂ ಪ್ರಲೋಭನೆಗಳಿಗೆ ಸುಲಭವಾಗಿ ಒಳಗಾಗಬಹುದಾಗಿತ್ತೋ ಆ ವಯಸ್ಸಿನಲ್ಲಿ ಪ್ರಲೋಭನೆಗಳನ್ನೆಲ್ಲಾ ತುಚ್ಛೀಕರಿಸಿ ಮಾಯೆಯನ್ನು ದಾಟಿ ನಿರ್ಮಾ ಯನ್ನುಮುಟ್ಟಿದ ಸಾಧ್ವಿ, "ಈ ದಿಟ್ಟತನ, ಯೌವನದಲ್ಲಿಯೇ ನಿರ್ವಿಕಾರ ಸುಖದ ಸುಪ್ಪ ಗೆಯಲ್ಲಿಯೇ ವೈರಾಗ್ಯವನ್ನು ಪಡೆಯುವುದು ಅಸಮಾನ್ಯರಿಗೂ ಅಸಾಧ್ಯವೇ, ಇಂತಹ ಉದಾಹರಣೆ ಮತ್ತೊಂದಿರಲಾರದು. ಅಸಾಧ್ಯವನ್ನು ಸಾಧ್ಯವಾಗಿಸಿದ ನಿಸ್ಸೀಮ ಈಕೆ. ಮೈಯ ನಾಚಿಕೆಯನ್ನು ಯೌವನದಲ್ಲಿಯೂ ಹೆಣ್ಣಾದವಳು ತೊರೆಯುವುದು ಸುಲಭದ ಮಾತೇನಲ್ಲ. ಆಗಿನ ಸಮಾಜದ ಪರಿಸ್ಥಿತಿಯಲ್ಲಿ ಇಪ್ಪತ್ತನ್ನು ದಾಟದ ಹರೆಯದ ಹೆಣ್ಣು ಸಮಾಜವನ್ನೇ ಎದುರಿಸಿ, ಹುಟ್ಟು ದಿಗಂಬರೆಯಾಗಿ, ದಟ್ಟಡವಿ ಯಲ್ಲಿ ಒಂಟಿಯಾಗಿ ಅಂದು ಗುರಿಯನ್ನು ಮುಟ್ಟಿದುದು ಅದ್ಭುತದ ಸಂಗತಿಯಲ್ಲವೆ ಈಕೆ ಸಾಮಾನ್ಯ ವ್ಯಕ್ತಿ, ದೈವಾಂಶ ಸಂಭೂತೆ ಎಂಬ ವಿಷಯವನ್ನು ಮನದಟ್ಟು ಮಾಡಿಕೊಡುತ್ತವೆ.

ಈ ಅಕ್ಕನ ವಚನಗಳಲ್ಲಿ ಕೊಟ್ಟಿರುವ ಉಪಮೆಗಳು "ಹೇಳುವ ಅರ್ಥವನ್ನು ಸ್ಪಷ್ಟೀಕರಿಸಿ ವಿಷಯಗಳನ್ನು ಸುಲಭಗ್ರಾಹ್ಯವಾಗುವಂತೆ ಮಾಡಿವೆ. ಎಲ್ಲ ಉಪಮೆಗಳು ಜೀವಂತ ಉಪಮೆಗಳು. ದಿನ ದಿನದ ಲೋಕಾನುಭವದಿಂದ ನೇರವಾಹಿ ಸೆಳೆದು- ಕೊಂಡುವುಗಳು " ಅಕ್ಕನ ವಚನಗಳಿಂದ ಅಕೆಯ ಗುಣ, ಶೀಲ, ಸ್ವಭಾವ, ಚಾರಿತ್ರ್ಯ ಗಳ ಕಲ್ಪನೆ ಪಡೆಯಬಹುದಾಗಿದೆ' ಪ್ರಭುದೇವರೊಡನೆ ಅಕ್ಕನು ಸಂವಾದವಲ್ಲಿ ಅಕೆಯು ಡಾ|| ಹುಣ್ಸಾಳರು ತಿಳಿಸಿರುವಂತೆ.

ಹೀಗೆ ಶೂನ್ಯಸಿಂಹಾಸನಾಧೀಶ್ವರನೂ, ಬಸವೇಶ್ವರನ ಗೌರವ, ಪೂಜ್ಯತೆಗಳಿಗೆ ಪಾತ್ರನಾದ ಅಲ್ಲಮ ಪ್ರಭುವಿಗೆ ಮೆಚ್ಚುಗೆ ಎನಿಸುವ ಉತ್ತರ ಕೊಟ್ಟು ಎಲ್ಲರ ದೃಷ್ಟಿ ಯಲ್ಲಿ ಸ್ತ್ರೀಯ ಸ್ಥಾನಮಾನಗಳನ್ನು ಉನ್ನತಿಸಿದ್ದಾಳೆ.

ಇಂತಹ ಉನ್ನತ ಶಿಖಮಣಿಯಾದ ಅಕ್ಕನ ಬಗ್ಗೆ ಎಲ್ಲರೂ ತಿಳಿದಿರುವುದು ಅವಶ್ಯಕ. ವಿಧ ವಿಧವಾ ಕಥೆಗಳು ಅಕೆಯ ಬಗೆಗಿದ್ದರೂ ಮುಖ್ಯವಾಗಿ ಮಾತ್ರ ಎಲ್ಲವುಗಳಲ್ಲಿಯೂ ‹ ಏಕತೆ ಇದೆ. ಈಗ ಹರಿಹರನು ಬರೆದಿರುವ ರಗಳೆಯನ್ನು ತೆಗೆದುಕೊಳ್ಳೋಣ. ಅದರಲ್ಲಿ ಚಿತ್ರಿಸಿರುವಂತೆ ಅಕ್ಕಮಹಾದೇವಿ ಪಾರ್ವತಿಯ

ಒಡ್ಡೋಲಗವಲ್ಲಿದ್ದ ಮಹಾದೇವಿ ಎಂಬ ರುದ್ರಕನ್ನೆಗೆ ಒಮ್ಮೆ ಪರಮೇಶ್ವರನಿಂದ ಕಳಿಸಲ್ಪಟ್ಟ ಗುಪ್ತಗಣನಾಥನು ಪಾರ್ವತಿಯ ಓಲಗಕ್ಕೆ ಬಂದು ಆಕೆಗೆ ನಮಸ್ಕರಿಸುವಾಗ ಅವನ ಕಾಲು ಈ ರುದ್ರಕ್ಕನ್ನಿಕೆಗೆ ತಗಲುತ್ತದೆ. ಇದರಿಂದ ಕುಪಿತಳಾದ ಮಹಾದೇವಿಯಕ್ಕ, ‘ ಭವೀ, ನೋಡದ ನಮಸ್ಕರಿಸು, ಎಂದು ನಿಂದಿಸುತ್ತಾಳೆ. ಶಿವನ ಭಕ್ತರಿಗೆ ’ ಭವ ಎಂಬುದಕ್ಕಿಂತ ಹೀನವಾದ ಶಬ್ದ ಮತ್ತೊಂದಿಲ್ಲ. ಶಿವನ ಪರಮಭಕ್ತನಾದ ತನ್ನನ್ನು ‘ ಭವಿ ’ ಎಂದು ಕರೆದುದಕ್ಕಾಗಿ ಕಾದ ಎಣ್ಣೆಯಲ್ಲಿ ಹಾಕಿ ಕುದಿಸಿದಷ್ಟು ನೊಂದುಕೊಳ್ಳುತ್ತಾನೆ. ಗಣನಾಥ, ಅವನ ಸಂಕಟವನ್ನು ನೋಡಿ ಮಹಾಮಾತೆಯಾದ ಪಾರ್ವತಿಗೆ ಕನಿಕರವಾದುದಲ್ಲದೆ ರುದ್ರಕನ್ನಿಕೆಯ ಮುಂಗೋಪಕ್ಕೆ ಸಿಟ್ಟೂ ಬರುತ್ತದೆ. ಆಗ ‘ ನೀನು ಮರ್ತ್ಯದಲ್ಲಿ ಶಿವಭಕ್ತೆಯಾಗಿ ಹುಟ್ಟಿ, ಭವಿಗೆ ಹೆಂಡತಿಯಾಗಿ ’ ಶ್ರೀ ಶೈಲಕ್ಕೆ ತೆರಳಿ ನಂತರ ಇಲ್ಲಿಗೆ ಬಾ ’ ಎಂದು ಶಪಿಸುತ್ತಾಳೆ. ಅದರಂತೆ ಶಿವಭಕ್ತ ಶಿವಭಕ್ತೆಯರ ಮಗಳಾಗಿ ಜನ್ಮತಾಳಬೇಕಾಗುತ್ತದೆ ರುದ್ರಕ್ಕನ್ನಿಕೆಗೆ ತಾನು ಮರ್ತ್ಯದಲ್ಲಿ ಜನಿಸಿ ಜಗನ್ಮಾತೆಯಿಂದ ದೂರವಿರಬೇಕಾದ ದುಃಖದ ಜೊತೆಗೆ ‘ ಭವಿ ’ ಯ ಪತ್ನಿಯಾಗಬೇಕಾದ ಪರಿಸ್ಥಿತಿ ನುಂಗಲಾರದ ತುತ್ತಾಗುತ್ತದೆ. ಆದರೆ ತಪ್ಪಿಗೆ ತಕ್ಕ ಪ್ರಾಯಶ್ಚಿತ್ತ ಅನುಭವಿಸಲೇಬೇಕು. ಅದಕ್ಕಾಗಿ ಶಿವಭಕ್ತ ಶಿವಭಕ್ತಿ ಶಿವಭಕ್ತೆಯರ ಮುದ್ದಿನ ಮಗಳಾಗಿ ಉಡುತಡಿಯಲ್ಲಿ ಜನ್ಮತಾಳುತ್ತಾಳೆ. ಪೂರ್ವ ಸಂಸ್ಕಾರದಿಂದ ಈಕೆ ಬಾಲ್ಯದಿಂದಲೇ ಶಿವಭಕ್ತ ಸಂಪನ್ನಳಾಗಿ ಸದಾ ಶಿವಧ್ಯಾನ ಶಿವಪೂಜೆಯಲ್ಲಿಯೇ ಮಗ್ನಳಾಗಿರುತ್ತಾಳೆ. ಬೆಳೆಯುವ ಸಸಿಯನ್ನು ಮೊಳಕೆಯಲ್ಲಿಯೇ ನೋಡು’ ಎಂಬಂತೆ ಬಾಲ್ಯದಿಂದಲೇ ಶಿವಶರಣೆಯ ಲಕ್ಷಣಗಳೆಲ್ಲಾ ಈಕೆಯಲ್ಲಿದ್ದವು. ‘ಲಿಂಗಪತಿ ಶರಣ ಸತಿ’ ಎಂಬ ಶರಣ ಬೀಜಮಂತ್ರವು ಈಕೆಯ ಮನಸ್ಸಿಗೆ ತುಂಬಾ ನಾಟಿತು, ಚೆನ್ನಮಲ್ಲಿಕಾರ್ಜುನನೇ ತನ್ನ ಪತಿ ಸಾಮಾನ್ಯರಾದ ಸಾವಕೆಡುವ ಗಂಡರನ್ನು ತಾನು ಮಾಡಿಕೊಳ್ಳುವುದಿಲ್ಲವೆಂಬ ನಿರ್ಧಾರವನ್ನು ಬಾಲ್ಯದಿಂದಲೇ ನೀರೆರೆದು ಪೋಷಿಸಿದಳು. ಇಂತಹ ಭಾವನೆ ರಕ್ತಗತವಾಡಿಕೊಳ್ಳುತ್ತ ಪ್ರೌಢ ತರುಣಿಯಾದಳು. ನವಯೌವನದಿಂದೊಡಗೂಡಿ ಇದಿಂವ ಕಾಮುಕರಂ ಕೇಳಿ ಮಾಡಲಿರ್ದಪುದುಃ ಇದಾವ ರಸಿಕರ ಭಾವವಂ ಬರಿಕೈಯರ್ದಪುದೇ ಇದಾವ ಸಜ್ಜನರಂ ನೀತಿ ಗೆಡಿಸಲಿರ್ದಪುದು ಎಂದು ಅಚ್ಚರಿಪಡುವಂತೆ ಬೆಳೆದು ನಿಂತಳು.

ಇಂದು ಗ್ರಾಮವಾಗಿ ಬೆಳೆದಿರುವ ‘ಉಡಿತಡಿ’ಯು ಅಂದು ಕೌಶಿಕನೆಂಬ ಅರಸನ ರಾಜಧಾನಿಯಾಗಿತ್ತು. ಒಮ್ಮೆ ರಾಜನು ವೈಹಾಳಿಯಿಂದ ಹಿಂತಿರುಗಿ ಅರಮನೆಗೆ ಹೋಗುತ್ತಿರುವಾಗ ರಾಜನ ದರ್ಶನಾರ್ಥ ನಿಂತ ಜನರ ಸಮೂಹದಲ್ಲಿ ಘೊಡಕ ಕಳೆಗಳಿಂದ ಕಂಗೊಳಿಸುತ್ತಿದ್ದ ಮಹಾದೇವಿ ರಾಜನ ದೃಷ್ಟಿಗೆ ಬಿದ್ದಳು. ಅವಳ ದಿವ್ಯ ರೂಪವನ್ನು ಕಂಡು ಮೋಹಿತನಾಗಿ ಆಕೆಯಂತಹ ರೂಪರಾಶಿ ತನ್ನರಮನೆಯಲ್ಲಿಲ್ಲ

ದಿದ್ದರೆ ತನ್ನ ಅಂತಃಪುರಕ್ಕೆ ಶೂನ್ಯತೆ ಎಂದು ಯೋಚಿಸಿ ಆಕೆಯನ್ನು ವಿವಾಹ ಮಾಡಿಕೊಳ್ಳಬೇಕೆಂದು ನಿಶ್ಚಯಿಸಿಯೇ ಅರಮನೆಯನ್ನು ಪ್ರವೇಶಿಸುತ್ತಾನೆ. ಎಂಟುನೂರು ವರ್ಷಗಳ ಹಿಂದೆ ರಾಜನ ಅಭಿಲಾಷೆಯನ್ನು ವಿರೋಧಿಸುವವರಾರು ತಡೆಯುವರಾರು ಯುಕ್ತಾ ಯುಕ್ತಕರ್ವೋ ಧರ್ಮಾಧರ್ಮವೋ ವಿಚಾರಿಸುವಂತಿಲ್ಲ. ಪ್ರಜೆಗಳು ರಾಜಾಜ್ಞೆಗೆ ಶಿರಬಾಗಲೇಬೇಕು. ವಿಜಯನಗರದರಸರು ಆಳುವ ಕಾಲದಲ್ಲೇ 'ರಾಜನು ಹೆಳಿಕಳುಹಿಸಿದನೆಂದು ಬಂಡೆ ಬೆನ್ನು ಮೇಲೆ ಹೊತ್ತು ನಿಲ್ಲಬೇಕೆಂದು ರಾಜನ ಕಡೆಯ ಒಬ್ಬ ಅಧಿಕಾರಿ ಹೇಳಿದರೆ, ಕಾರಣ ಕೇಳದೆಯೇ ಪ್ರಜೆಗಳು ಆಗಿನ ಕಾಲದಲ್ಲಿ ಮರು ಮಾತಿಲ್ಲದೆ ಬಂಡೆ ಹೊತ್ತು ನಿಲ್ಲುತ್ತಿದ್ದರಂತೆ, ಎಂದಮೇಲೆ ಅದಕ್ಕೂ ಶತಮಾನಗಳು ಮೊದಲು ರಾಜರ ದಬ್ಬಾಳಿಕೆಗೆ ಮಿತಿ ಎಲ್ಲಿಯದು? ರಾಜನ ಮನಸ್ಸಿಗೆ ಬಂದುದು ಈಡೇರಲೇಬೇಕು. ಎಂತಲೇ ಮರುದಿನವೇ ಅಕ್ಕಮಹಾದೇವಿಯ ತಂದೆ ತಾಯ್ಗಳಿಗೆ ರಾಜನ 'ಅಭಿಲಾಷೆ'ಯ ಸುದ್ದಿ ಬಂದಿತು. ಅವರುಗಳಾದರೋ ಕಟ್ಟಾ ಶಿವಭಕ್ತರು; ಕೌಶಿಕರಾಜನಾದರೋ ಭವಿ; ರಾಜಾಜ್ಞೆ ಮೀರುವಂತಿಲ್ಲ, ಉಗುಳಲೂ ಆಗದ ನುಂಗಲೂ ಆಗದ ಪರಿಸ್ಥಿತಿ. ಮಹಾದೇವಿಯಾದರೋ ಮಲ್ಲಿಕಾರ್ಜುನನೇ ಗಂಡನೆಂದು ಭಾವಿಸಿ ಬೆಳೆದವಳು. ಉಳಿದ ಶಿವಭಕ್ತರನ್ನೂ ವರಿಸುವ ಮನಸ್ಸಿಲ್ಲದ ಆಕೆ "ಭವಿ"ಯನ್ನು ವರಿಸಲು ಒಪ್ಪಬಹುದೇ; ಆದರೆ ವಿಧಿ ಇಲ್ಲ. ಒಪ್ಪಲೇಬೇಕಾದ ಪ್ರಸಂಗ ಧರ್ಮಾಚಾರಗಳಿಗೆ, ಶಿವಪೂಜೆ, ಶರಣದಾಸೋಹ, ಜಂಗಮಸೇವೆ ಮೊದಲಾದವುಗಳಿಗೆ ಭಂಗತರದಿದ್ದಲ್ಲಿ ವಿವಾಹಕ್ಕೆ ಸಮ್ಮತಿ ಎಂದೂ, ವಿವಾಹವಾದಮೇಲೂ ರಾಜನು ಮೂರು ಸಾರಿ ವಚನಕ್ಕೆ ಮೀರಿ ನಡೆದರೆ ರಾಜನನ್ನೇ ತೊರೆದು ಹೋಗುವುದಾಗಿ ಷರತ್ತುಗಳನ್ನು ಹಾಕುತ್ತಾಳೆ ಕಾಮಾತುರನಾದ ರಾಜ ವಿವಾಹದ ನಂತರ ಎಲ್ಲವೂ ತನ್ನಿಚ್ಛೆಯಂತೆ ಮಾರ್ಪಡುವುದೆಂದು ಭಾವಿಸಿ ಎಲ್ಲ ಷರತ್ತುಗಳಿಗೂ ಒಪ್ಪುವನು. ವಿವಾಹವಾಗುತ್ತದೆ. ಕೆಲವು ಕಾಲ ಕೌಶಿಕನ ಅರಸಿಯಾಗಿದ್ದು ನಂತರ ಅವನು ಮೂರು ತಪ್ಪುಗಳನ್ನು ಮಾಡಿದ ತಕ್ಷಣ ಸರ್ವವನ್ನೂ ತ್ಯಜಿಸಿ ವೈರಾಗ್ಯನಿಧಿಯಾಗಿ ಮಲ್ಲಿಕಾರ್ಜುನನ್ನು ಹುಡುಕಿಕೊಂಡು ಹೊರಡುತ್ತಾಳೆ. ಇದು ರಸವತ್ತಾಗುವಂತೆ ಹೆಣೆದಿರುವ ಕಥೆ ಆದರೆ ಈಕೆಯ ವಿವಾಹ ಕೌಶಿಕನೊಡನೆ ಆಯಿತೆ, ಇಲ್ಲವೇ, ಅವನೊಡನೆ ವೈವಾಹಿಕ ಜೀವನ ನಡೆಯಿಸಿದಳೇ ಇಲ್ಲವೆ ಎಂಬ ಬಗ್ಗೆ ವಿವಿಧಾಭಿಪ್ರಾಯಗಳು ಇವೆ. ಈಕೆ ಮಾತ್ರ;

ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ, ಚೆಲುವಂಗಾನೊಲಿದೆನವ್ವಾ,  
ಎಡೆ ಎಲ್ಲದ ತಡೆ ಇಲ್ಲದ, ತೆರೆಹಿಲ್ಲದ, ಕುರುಹಿಲ್ಲದ ಚೆಲುವಂಗಾನೊಲಿದೆ:  
ಎಲೆ ಅಪ್ಪಾ: ನೀನು ಕೇಳಾ ತಾಯೇ:  
ಭವವಿಲ್ಲದ ಭಯವಿಲ್ಲದ ನಿರ್ಭಯ ಚೆಲುವಂಗೊಲಿದೆ ನಾನು,  
ಕುಲಸೀಮೆ ಇಲ್ಲದ ನಿಸ್ಸೀಮ ಚೆಲುವಂಗಾ ನಾನೊಲಿದೆ,  
ಇದು ಕಾರಣ ಚನ್ನಮಲಿಕಾರ್ಜನ ಚಲುವ ಗಂಡನೆನಗೆ  
ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು"

ಕಾಯಿಗೆ ಕೊಟ್ಟ ಅಕ್ಕನ ಉತ್ತರವೆಂಬಂತೆ ತೋರುತ್ತದೆ. ಆದ್ದರಿಂದ ಆಕೆ ಕೌಶಿಕನೊಡನೆ ವಿವಾಹವಾದಳೇ ? ವೈವಾಹಿಕ ಜೀವನ ನಡೆಸಿದಳೆ( ಎಂಬ ಬಗ್ಗೆ ಉಹಾಪೋಹಗಳಿನವಕಾಶಗಳಿವೆ. ಅಕ್ಕನು ಕೌಶಿಕನ ಮನೆಯಲ್ಲಿದ್ದುದನ್ನು ಒಪ್ಪಿಕೊಂಡರೆ ಅವನೊಡನೆ ವಿವಾಹವಾದುದನ್ನು ಅವನೊಡನೆ ವೈವಾಹಿಕ ಜೀವನ ನಡೆಸಿದ ಳೆಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಅಂತಹ ನೇಮ ನಿಷ್ಠೆಯಲ್ಲಿ ಬೆಳೆದ ಆಕೆಯಾಗಲೀ ವಿವಾಹ ಸಂಸ್ಕಾರವಿಲ್ಲದೆ ಅಂತ:ಪುರದಲ್ಲಿ ಬೆಲೆವೆಣ್ಣಿನಂತೆ ಇರಲು ಒಪ್ಪಿರಲಾರರು' ಅಂದಮೇಲೆ ವಿವಾಹವಾಗಿ ಧರ್ಮದ ಹಾಗೂ ಸಮಾಜದ ಒಪ್ಪಿಗೆಯ ಮುದ್ರೆಯೊತ್ತಿದ ಮೇಲೆ ಕಾಮಾಂಧನಾದ ಕೌಶಿಕನು ತನ್ನ ವಶದಲ್ಲೇ ಇದ್ದ ಪತ್ನಿಯೊಡನೆ ವೈವಾಹಿಕ ಜೀವನ ನಡೆಸದಷ್ಟು ವಿಚಾರಶೀಲನಾಗಿದ್ದ ಎನ್ನವುದಾದರೆ ಬಲ್ಲವಂತನಾಗಿ ಅಕೆಯನ್ನು ವರಿಸಲು ಒತ್ತಾಯಿಸುವವನಲ್ಲ ಎಂದು ಒಪ್ಪಿಕೊಳ್ಳಬೇಕಾಗುತ್ತದೆ. ಆದರೆ ಈ ದಿಶೆಯಲ್ಲಿ ಚರ್ಚಿಸುವುದು ವ್ಯರ್ಥವೆನ್ನಿಸುವುದು ಆಕೆಯು ವಿವಾಹ ಕೌಶಿಕನೊಡನೆ ಆಗಿರಲಿ ಆ ವಿಷಯ ವೈರಾಗ್ಯ ಲೋಕದಲ್ಲಿ ಅಕ್ಕನ ಸ್ಥಾನವನ್ನು ಕಿಂಚಿತ್ತೂ ಹಿರಿದನ್ನಾಗಿ ಮಾಡಲು ವಿವಾಹಕ್ಕೆ ಒಪ್ಪದೇ ಎಲ್ಲವನ್ನು ತೊರೆದು ಹೋಗಿದ್ದರೂ ಅದ್ಭುತ ಸಂಗತಿಯೇ. ವಿವಾಹವಾಗಿಯೂ ಅದರಕಾಲ್ತೊಡಕುಗಳನ್ನೆಲ್ಲಾ ಹರಿದೊಗೆದು, ಸಂಸಾರ ಬಂಧನಕ್ಕೆ ಸಿಕ್ಕಿಯೂ ಕಮಲ ಪತ್ರದ ಮೇಲಿನ ನೀರು ಹನಿಯಂತೆ ಅದಕ್ಕೇ ಅಂಟಿಕೊಳ್ಳದೆ ಮರಳಿ ಬರುವುದು ಮಹಿಮಾನ್ವಿತರಿಗಲ್ಲದೆ ಸಾಧಾರಣರಿಗೆ ಸಲ್ಲುವ ಮಾತಲ್ಲ. ಅ ಬಂಧನಕ್ಕೆ ಆಕೆಯನ್ನು ಸಿಲುಕಿಸಿದ ಸನ್ನಿವೇಶ ಅಕ್ಕನನ್ನು ಒರೆಗೆ ಹಚ್ಚಿದಂತಾಯ್ತು ಚಿನ್ನಕ್ಕೆ ಪುಟವಿಟ್ಟಂತೆ ಆಕೆಗೆ ಮತ್ತಷ್ಟು ಹೊಳಪನ್ನು ಕೊಟ್ಟಿತೇ ವಿನಃ ಯಾವ ರೀತಿಯಲ್ಲಿಯೂ ಅಕ್ಕನ ಮಹತಿಯನ್ನು ಕಡಿಮೆಮಾಡುವುದಿಲ್ಲ. ಆದುದರಿಂದ, ಭವಿ' ಯನ್ನು ವಿವಾಹವಾದಳೆಂಬ ಸಂಗತಿ ಆಕೆಗೆ ಆದ ಅವಮಾನ ಮಾಡೀತೋ ಅದು ನಡೆದೇ ಇಲ್ಲ ಎಂಬಂತೆ ವಿಚಾರಿಸಲ್ಪಪಡುವುದಕ್ಕಿಂತ ಅದುವಿವಾದಾಸ್ಪದ ಎಂದುವಿಚಾರಮಾಡುವುದು ಅಥವಾ ನಡೆದರೂ ಆಕೆಯ ಘನತೆಯನ್ನು ಹೆಚ್ಚಿಸುತ್ತದೆ ಎಂಬ ದೃಷ್ಟಿಯಿಂದ ನೋಡುವುದು ಉತ್ತಮವಾಗಿ ತೋರುತ್ತದೆ.

ಅಂತೂ ಅಕ್ಕನು ಎಲ್ಲವನ್ನೂ ತ್ಯಜಿಸಿ ವಿರಾಗಿಣಿಯಾಗಿ ದೇವಮೋಹವನ್ನು ತೊರೆದು ಉಟ್ಟಬಟ್ಟೆಯನ್ನು ಬಿಸುಟು ಹೊರಟಳು. ಅಲ್ಲಿಂದ ಕಲ್ಯಾಣಕ್ಕೆ ನಡೆದು ಶರಣರ ಸಂಗದಿಂದ ಮತ್ತಷ್ಟು ಜ್ಞಾನ ಸಂಪಾದನೆ ಮಾಡಿ' ಅಲ್ಲಿ ಬಸವಾದಿ ಶರಣರ ಪ್ರೀತಿ, ಆದರ, ಗೌರವಗಳಿಗೆ ಪಾತ್ರಳಾಗಿ ಶ್ರೀ ಶೈಲಕ್ಕೆ ತನ್ನ ಒಲುಮೆಯ ಚನ್ನಮಲ್ಲಿಕಾರ್ಜುನನ್ನು ಕಾಣಲು ಹೋಗಿ ಅಲ್ಲಿ ಬಯಲಾದಳು.

( ಮುಂದುವರೆಯುತ್ತದೆ )

# ಗ್ರಾಮಾಂತರ ಬಸವ ಜಯಂತಿ-201

ಹೆಚ್. ವಿ. ವೀರಭದ್ರಯ್ಯ, ಉಪನ್ಯಾಸಕರು ಕನ್ನಡ ವಿಭಾಗ, ಸಿದ್ಧಗಂಗಾ ಕಾಲೇಜು ತುಮಕೂ

**ಆತ್ಮೀಯ ಶರಣ ಬಂಧು,**

ದಿನಾಂಕ 14 . 6 . 1987 ರಂದು ಬೆಂಗಳೂರು ಜಿಲ್ಲೆ ಗಾಣಿಗರ ಪಾಳ್ಯ ಗ್ರಾಮದ ಒಂದು ಸಂಭ್ರಮದ ದಿನವಾಯಿತು. ತಲಘಟ್ಟಪುರದಲ್ಲಿ ಬಸವಣ್ಣ ದೇವಾಲಯ ಜೀರ್ಣೋದ್ಧಾರ ಸಂದರ್ಭ. ಗ್ರಾಮವೆಲ್ಲ ಮಿಂದು ಮಡಿಯುಟ್ಟು ಭಕ್ತಿ ಶ್ರದ್ಧೆಗಳನ ಲೋಕಕ್ಕೆ ಸಾರಿತು.

ಪರಮ ಪೂಜ್ಯರು ಬಸವಣ್ಣನವರ ಸಂದೇಶಗಳನ್ನು ಹೊತ್ತ ಹರಿಕಾರರಂತೆ ನ ದರು. ಸಮಾರಂಭದಲ್ಲಿ ಬಸವಣ್ಣನವರ ಉದಯವಾದದ್ದೆ ಸಮಸ್ತಜನರ ಉದ್ಧಾ ಕ್ಕಾಗಿ ಎಂದು ನುಡಿದರು. ತಲಘಟ್ಟಪುರದ ಸಮಾರಂಭಕ್ಕೆ ಬಂದಿದ್ದ ಆಸ್ತಿಕ ಬಂಧ ಗಳೆಲ್ಲ ಮೂಕವಿಸ್ಮಿತರಂತೆ ಪರಮ ಪೂಜ್ಯರ ವಾಣಿಗಳನ್ನಾಲಿಸಿದರು.

ಎರಡನೆಯ ಅಧಿವೇಶನ ಗಾಣಿಗರ ಪಾಳ್ಯದಲ್ಲಿ ಸಂಜೆ ನಾಲ್ಕುಘಂಟೆಗೆ ಪ್ರಾರಂಭ ವಾಯಿತು. "ಬಸವಣ್ಣನವರಂಥ ಭಕ್ತರಿಲ್ಲ, ಅವರು ಮಾಡಿದಂಥ ಗುರುಲಿಂಗ ಜಂಗವ ಸೇವೆ ನಭೂತೋ ನಭವಿಷ್ಯತಿ" ಎಂಬಂತಾಯಿತು. ಎಂಬುದಾಗಿ ಕಂಚುಗಲ್ಲು ಬಂಡೇಮಠದ ಪೂಜ್ಯ ಶ್ರೀ ಶ್ರೀ ಶಿವರುದ್ರಸ್ವಾಮಿಗಳು ನುಡಿದರು. " ಕೇವಲ ಸಭೆ ಸಮಾರಂಭಗಳನ್ನು ಮಾಡುವುದರಲ್ಲಿ ಬಸವಣ್ಣನವರ ಜಯಂತಿ ಮುಗಿಯಬಾರದು ಅವರು ಹೇಳಿದಂತೆ ನಡೆದಂತೆ ಬಾಳುವ ಸಂಕಲ್ಪ ನಮ್ಮದಾಗಬೇಕು. ಹಾಗೆ ಆದಾಗಲೇ ಜಯಂತಿ ಸಾರ್ಥಕವಾಗುವುದು, ಪರಮ ಪೂಜ್ಯ ಶ್ರೀ ಶ್ರೀ ಗಳ ಸಂಕಲ್ಪಕ್ಕೆ ಅರ್ಥ ಬರುವುದು" ಎಂಬುವುದಾಗಿ ನುಡಿದರು. ನೆಲಮಂಗಲದ ಪವಾಡದ ಬಸವಣ್ಣ ದೇವರ ಮಠದ ಪೂಜ್ಯ ಶ್ರೀ ಶ್ರೀ ಸದಾಶಿವಸ್ವಾಮಿಗಳು ಕನಕಪುರದ ಶ್ರೀ ಬಿ. ನಂಜುಂಡಪ್ಪ ನವರು ಉಪನ್ಯಾಸಮಾಡುತ್ತ ಬಸವಾದಿ ಶರಣರು ಆಚರಿಸಿತೋರಿಸಿದ ಶೀಲಸಂಪತ್ತಿನ ಪರಿಚಯಮಾಡಿಕೊಟ್ಟರು. ಶ್ರೀ ಜಿ. ಎಸ್. ಸಿದ್ಧಲಿಂಗಯ್ಯನವರು (ಪ್ರಾಚಾರ್ಯರು ಆರ್. ಸಿ. ಕಾಲೇಜು ಆಪ್ ಕಾಮರ್ಸ್, ಬೆಂಗಳೂರು) ಮಾತನಾಡುತ್ತ ಬಸ ಣ್ಣನವರ ವಚನಗಳ ಭಾಷಾಸಿದ್ಧಿ ಅದ್ಭುತವಾದುದು, ಜನನಾಡಿಯನ್ನು ಮೀಟಿ ಭಾವತರಂಗಗಳನ್ನು ಏಳಿಸುವಂಥದು, ಮೇಲಾಗಿ ಕನ್ನಡ ಭಾಷೆಗೆ ಕಾಂತಿಯನ್ನು ಹೊಳಪನ್ನು ಬಸಿ ಬಿಗಿಗಳನ್ನು ತಂದುಕೊಟ್ಟದ್ದು ಎಂದು ಮೆಚ್ಚುನುಡಿದರು. ಶ್ರೀ.ಗೊ.ರು. ಚೆನ್ನಬಸಪ್ಪನವರು (ಉಪನಿರ್ದೇಶಕರು ಕುಟುಂಬ ಕಲ್ಯಾಣ ಯೋಜನೆ ಬೆಂಗಳೂರು) ಮಾತನಾಡುತ್ತ ನಗರ ಜೀವನದ ಕೃತ್ರಿಮತೆಯ ಪರಿಹಾರಕ್ಕೆ ಗ್ರಾಮ ಜೀವನದ ನೈಜ ನೈರ್ಮಲ್ಯವೇ ಪರಿಹಾರ – ಇಂತಹ ಕಡೆ ಬಸವಣ್ಣನವರ ಜಯಂತಿ

ನಡೆಯುತ್ತಿರುವುದು ನಿಜಕ್ಕೂ ಸಂತೋಷದಾಯಕ ಎಂದು ಹೇಳಿದರು. " ಜನಪದರ ಜೀವನ ಜ್ಯೋತಿಯಾಗಿ ಅರಳಿದ ಬಸವಣ್ಣನವರ ಜೀವನ ಚಿತ್ರವನ್ನು ಶ್ರೀ ಹೆಚ್. ವಿ. ವೀರಭದ್ರಯ್ಯನವರು ಮಾಡಿಕೊಟ್ಟರು.

ಭಗವಾನ್ ಬಸವಣ್ಣನವರು ಅಪಾರ ದಯಾಪರರು. ದೀನ – ದಲಿತರನ್ನು ಕಂಡರೆ ಅವರಿಗೆ ಎಲ್ಲಿಲ್ಲದ ಪ್ರೀತಿ. ಅವರ ಉದ್ಧಾರಕ್ಕೆ ಏನುಮಾಡಬಹುದೆಂಬ ಚಿಂತೆ, ಅವರ ಅಜ್ಞಾನವನ್ನು ಕಂಡಾಗ ದುಃಖ ಅವರಲ್ಲಿದ್ದ ಮೌಢ್ಯತೆಯನ್ನು ಗಮನಿಸಿದಾಗ ತೀವ್ರ ನೋವು. ಶತ ಶತಮಾನಗಳಿಂದ ಜಡ್ಡುಗಟ್ಟಿದ್ದ ವರ್ಣಾಶ್ರಮ ಧರ್ಮದ ಬಗ್ಗೆ ಅತೀವ ಅಸಮಧಾನ, ಜಿಗುಪ್ಸೆ. ಮಾನವರೆಲ್ಲ ಒಂದೆ ಎಂಬ ವಿಶಾಲ ಭಾವನೆ, ಕೂಡಿಬದುಕಬಾರದೇಕೆ ಎಂಬ ಕಾತರ. ವ್ಯಕ್ತಿ ಸೋಮಾರಿಯಾಗಿರಬಾರದು ಎಂಬ ನಿರಂತರ ಎಚ್ಚರದ ಬೋಧನೆ ಗಳಿಸಿದ್ದನ್ನು, ಹಂಚಿ ಊಟ ಮಾಡು ಎಂಬ ವಿವೇಕದ ಮಾತು. ತನಗಿಂತಲೂ ದೊಡ್ಡ ಶಕ್ತಿಯಿದೆ ಎಂಬ ತುಂಬು ನಂಬಿಕೆ. ಹೆಣ್ಣುಮಕ್ಕಳ ಬಗ್ಗೆ ಅಪಾರಗೌರವ. ಎಲ್ಲರನ್ನು ಬಾಚಿ ಎದೆಗೆ ತಬ್ಬಿಕೊಳ್ಳುವ ಮಾನವ ಪ್ರೇಮ ಮಕ್ಕಳಿಗೂ ಅರ್ಥವಾಗುವಂತೆ ಸಾಹಿತ್ಯ ರಚನೆ, ಸಮಾಜದ ಎಲ್ಲರ ಅನುಭವಕ್ಕೂ ಅರ್ಥವಿದೆ, ಎಲ್ಲರ ವಿಚಾರಗಳಿಗೂ ಅವಕಾಶವಿದೆ ಎಂಬ ಮುಕ್ತಮನೋಧರ್ಮ, – ' ಅನುಭವ ಮಂಟಪ, ವೆಂಬ ವಿಶಿಷ್ಟ ಸಂಸ್ಥೆಯ ಉದಯ ಜಗತ್ತಿನ ಇತಿಹಾಸಕಂಡ ಬೆಳಕಿನ ಪುಟ ಭಗವಾನ್ ಬಸವಣ್ಣನವರು ಸನ್ಯಾಸಿಗಳಾಗಿರಲಿಲ್ಲ, ಗೃಹಸ್ಥರಾಗಿದ್ದರು, ಆದರೂ ಪೂಜ್ಯರಾಗಿದ್ದಾರೆ. ಅವರಂತೆ ನಮ್ಮ ಬಾಳುನೆಡೆಯಬೇಕು. ಅವರ ವಚನಗಳನ್ನು ಯುವ ಜನಾಂಗ ಅಭ್ಯಾಸ ಮಾಡಬೇಕು, ಜಗತ್ತು ಕಂಡ ಅಪರೂಪ ಪುಣ್ಯಜೀವ ಬಸವಣ್ಣನವರು – ಎಂಬುವುದಾಗಿ ಪರಮ ಪೂಜ್ಯ ಶ್ರೀ ಶ್ರೀ ಗಳು ಅಧ್ಯಕ್ಷ ಪೀಠದಿಂದ ನುಡಿದರು.

ರಾತ್ರಿ ಹತ್ತು ಘಂಟೆಯಿಂದ " ಜಗಜ್ಯೋತಿ ಬಸವೇಶ್ವರ" ನಾಟಕ ಪ್ರಾರಂಭವಾಯಿತು. ಪಾತ್ರಧಾರಿಗಳಲ್ಲೊಬ್ಬರಾದ ಶ್ರೀ ಬಿ. ವೀರಭದ್ರಯ್ಯನವರು ಬಾರದೆ ನಾಟಕದ ಒಂದು ದೃಶ್ಯವನ್ನೇ ರದ್ದುಗೊಳಿಸುವ ಪರಿಸ್ಥಿತಿಯೊದಗಿತ್ತು. ಆದರೆ ಬಸವಣ್ಣನ ಅನುಗ್ರಹ, ಪರಮ ಪೂಜ್ಯರ ಮಣಿಹ, ತಮ್ಮಿಂದ ತೊಂದರೆ ಯಾಗಬಾರದೆಂದು ಶ್ರೀ ಬಿ. ವಿ. ಯವರು ಬೆಂಗಳೂರಿನಿಂದ ಮಧ್ಯರಾತ್ರಿ ಎರಡು ಘಂಟೆಯ ವೇಳೆಗೆ ಆಟೋರಿಕ್ಷಮಾಡಿಕೊಂಡು ಕಾಡುದಾರಿಯಲ್ಲಿ ಬಂದಾಗ ನಮಗೆಲ್ಲ ಆದಸಂತೋಷಕ್ಕೆ ಪಾರವೇ ಇಲ್ಲ. ಬೆಳಗಿನ ಐದು ಘಂಟೆಯ ತನಕ ನಾಟಕ ನಡೆಯಿತು. ಎಲ್ಲರ ಬಾಯಲ್ಲೂ ನಾಟಕದ "ಚಿದಾನಂದ–ಸದಾನಂದರ" ಮಾತೆ. ಬಸವಣ್ಣನ ಪಾತ್ರದಾರಿಯ ಹಾಡುಗಾರಿಕೆಗೆ ತಲೆದೂಗುವವರೆ, ಮಂಚಣ್ಣ ಪೆದ್ದರಸರ ಅಭಿನಯವನ್ನು ಕೊಂಡಾಡಿದ್ದೇ ಕೊಂಡಾಡಿದ್ದು.

" ಬಸವಣ್ಣ ನಿನ್ನೆಸರು ದೆಸೆದೆಸೆಗೆ ಶಿವಮಂತ್ರ " ಎಂದು ಹಾಡಿಕೊಂಡು ಹೋಗುತ್ತಿದ್ದವರದೆಷ್ಟೋ.



## ಶಿವೈಕ್ಯ ಎನ್. ಕೆಂಪನಂಜ ಶಾಸ್ತ್ರಿಗಳು

ದಿವಂಗತ ಎನ್. ಕೆಂಪನಂಜ ಶಾಸ್ತ್ರಿಗಳು ನೆಲಮಂಗಲ ತಾಲ್ಲೋಕು ಹಳೇ ನಿಜಗಲ್ಲಿನಲ್ಲಿ 1.4.1914 ರಲ್ಲಿ ಜನಿಸಿದರು. ಕೃಷಿ ಪ್ರಧಾನ ದೊಡ್ಡ ಕುಟುಂಬ ವೊಂದರಲ್ಲಿ ಜನಿಸಿದ ಇವರು ಪ್ರಾಥಮಿಕ ವಿದ್ಯಾಭ್ಯಾಸವನ್ನು ಹುಟ್ಟೂರಾದ ಹಳೇ ನಿಜಗಲ್ಲಿನಲ್ಲಿ ಮುಗಿಸಿ ವೇದ ಮತ್ತು ಸಂಸ್ಕೃತಾಭ್ಯಾಸಕ್ಕೆ ಶ್ರೀ ಸಿದ್ಧಗಂಗಾ ಮಠಕ್ಕೆ ಆಶ್ರಯ ಕೋರಿ ಬಂದರು. ಪೂಜ್ಯ ಶ್ರೀ ಉದ್ದಾನ ಶಿವಯೋಗಿಗಳವರ ಕೃಪಾಶ್ರಯಕ್ಕೆ ಪಾತ್ರರಾದರು. ಶ್ರೀ ಸಿದ್ಧಲಿಂಗೇಶ್ವರ ವೇದ-ಸಂಸ್ಕೃತ ಪಾಠಶಾಲೆಯಲ್ಲಿ ವೇದಾಧ್ಯಯನ ಮಾಡಿ ಸದರಿ ಪಾಠಶಾಲೆಯಲ್ಲಿಯೇ ವೇದ ಉಪಾಧ್ಯಾಯರಾದರು. ಡಾ|| ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರ ಅಂತರಂಗದ ಶಿಷ್ಯರಾಗಿ ಶ್ರೀ ಮಠದ ಹಿತೈಷಿಗಳಾಗಿ, ಅಭಿಮಾನಿಗಳಾಗಿ ನಾಲ್ಕೈದು ದಶಕಗಳು ಅವಿರತವಾಗಿ ದುಡಿದರು. ಶ್ರೀ ಮಠದ ಪವಿತ್ರವಾದ, ಪ್ರಸಿದ್ಧವಾದ ದಾಸೋಹ ಕಾರ್ಯದ ಮೇಲ್ವಿಚಾರಕರಾಗಿ ಮಾಡಿದ ಸೇವಾ ಕೈಂಕರ್ಯ ಪ್ರಶಂಸನೀಯವಾದದ್ದು. ಶ್ರೀ ಮಠದ ಆರ್ಥಿಕ ಪರಿಸ್ಥಿತಿ ಉತ್ತಮವಾಗಿರದ ಆಗಿನ ಕಾಲದಲ್ಲಿ ದಿವಂಗತ ಎನ್. ಕೆಂಪನಂಜಶಾಸ್ತ್ರಿಗಳಂಥವರ ಪ್ರಾಮಾಣಿಕ ದುಡಿತ ಸ್ಮರಣೀಯವಾದುದು. ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರ ತ್ರಿವಿಧ ದಾಸೋಹ ಕಾರ್ಯದಲ್ಲಿ ಅಳಿಲು ಸೇವೆ ಸಲ್ಲಿಸಿದ ಭಾಗ್ಯ ದಿವಂಗತರದು. ವೇದ ವಿದ್ವಾಂಸರನ್ನು ಸನ್ಮಾನಿಸುವ ಘನಸರ್ಕಾರದ ಯೋಜನೆಯನ್ವಯ ಸನ್ಮಾನಿತರಾದ ಶ್ರೀಯುತರು ಆದರ್ಶ ಉಪಾಧ್ಯಾಯರಾಗಿ ನಿವೃತ್ತಿ ಹೊಂದಿ ವಿಶ್ರಾಂತಿ ಜೀವನ ನಡೆಸುತ್ತಿದ್ದರು. ಕೆಲವು ದಿವಸ ಅನಾರೋಗ್ಯ ಪೀಡಿತರಾಗಿದ್ದ ದಿ|| ಶಾಸ್ತ್ರಿಗಳು ಪತ್ನಿ, ಮೂರು ಜನ ಪುತ್ರರು ಮತ್ತು ಒಬ್ಬ ಪುತ್ರಿಯರನ್ನ ಅಗಲಿ ದಿನಾಂಕ 28-9-1988 ರಂದು ನಿಧನರಾದರು. ಅವರ ಕುಟುಂಬ ವರ್ಗದವರಿಗೆ ಅಗಲಿಕೆಯ ದುಃಖವನ್ನು ಸಹಿಸುವ ಶಕ್ತಿಯನ್ನು, ಮೃತರ ಆತ್ಮಕ್ಕೆ ಶಾಂತಿಯನ್ನು ಭಗವಾನ್ ಸಿದ್ಧಲಿಂಗೇಶ್ವರರು ಕರುಣಿಸಲೆಂದು ಪ್ರಾರ್ಥಿಸುತ್ತಾ 'ಸಿದ್ಧಗಂಗಾ' ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.